# ನವಾಬ ಮತ್ತು ಗೌರಿ

( ನಾಟಕ )

■ ಡಾ. ಕೇಶವಶರ್ಮ ಕೆ.



# ನವಾಬ ಮತ್ತು ಗೌರಿ

(ನಾಟಕ)

ಡಾ. ಕೇಶವಶರ್ಮ ಕೆ.

ರಚನ ಪ್ರಕಾಶನ
# 791/5, 25/7ನೇ ಕ್ರಾಸ್,
ಹೆಬ್ಬಾಳ್ 2ನೇ ಹಂತ, ಮೈಸೂರು-17

# NAVABA MATTU GOWRI

(NATAKA)

*Written by*

**Dr. Keshavasharma .K**

Proffessor

Kannada Dept.

Kuvempu University, Jnanasahydri

Shankaraghatta, Shimoga-577451

Mob: 9448730611

email: dr.keshavasharma.k@gmail.com

*Published by*

***Rachana Prakashana***

*# 791/5, 25/7th Cross*

*Hebbal 2nd Stage, Mysore - 570017*

**ISBN: 978-93-85120-91-6**

*First Impression : 2016*



*Copies : 1000*

*Page : viii + 116 = 124*

*Price : ₹ **95/-***

*Paper used : 60 gsm Maplitho*

*D.T.P. : Anukshana Creations*

*Cover Page Design : Kiran*

*Printed at : Kamal Impressions, Mysore*

# NAVABA MATTU GOWRI

(NATAKA)

*Written by*

**Dr. KeshavaSharma .K**
Professor
Kannada Dept.
Kuvempu University, Jnanasahydri
Shankaraghatta, Shimoga-577451
Mob: 9448730611
email: dr.keshavasharma.k@gmail.com

*Published by*
*Rachana Prakashana*
*# 791/5, 25/7th Cross*
*Hebbal 2nd Stage, Mysore - 570017*

ISBN: 978-93-85120-91-6

*First Impression : 2016*

*Copies : 1000*
*Page : viii + 116 = 124*
*Price : ₹ 95/-*
*Paper used : 80 gsm Maplitho*
*D.T.P : [illegible] Creations*
*Cover Page Design : Kiran*
*Printed at : [illegible] Impressions, Mysore*

# ಲೇಖಕರ ಮಾತು

ಈ ನಾಟಕವನ್ನು ಬರೆದಿಟ್ಟು ಕೆಲವು ವರ್ಷಗಳೇ ಸಂದು ಹೋದವು. ಪ್ರಕಟಿಸುವ ಉತ್ಸಾಹವೂ ಬತ್ತಿಹೋಗಿತ್ತು. ಬರೆದುದು ಒಂದು ನಿರ್ದಿಷ್ಟ ಕಾರಣದಿಂದ. ಗೆಳೆಯ ಶ್ರೀಪಾದ ಭಟ್ ಶಿರಸಿ ಒಂದು ನಾಟಕ ಬರೆದುಕೊಡಿ ಎಂದರು. ಶ್ರೀಮತಿ ರಾಜೇಶ್ವರಿ ಅವರೂ ಕೂಡ ಆಗ ಒತ್ತಾಯಿಸಿದರು. ಅವರಿಬ್ಬರು ಮತ್ತು ಕುವೆಂಪು ವಿ.ವಿಯ ನಾಟಕ ತಂಡದ ಸ್ನೇಹಿತರು ನನಗೆ ಬರೆಯಲು ಪ್ರೇರೇಪಿಸಿದರು. ಅವರಿಗೆ ನಾನು ಕೃತಜ್ಞನಾಗಿದ್ದೇನೆ.

ಮಾನವೀಯತೆ ಎನ್ನುವುದು ಜಾತಿ, ಮತಗಳ ಬಂಧಿಯಲ್ಲ. ಮನುಷ್ಯತ್ವಕ್ಕೆ ಜಾತಿ, ಕೋಮು ಅಡ್ಡ ಬರಬಾರದು. ಬಂದರೆ ಅದು ಮಾನವೀಯ ಸಮಾಜವಾಗುವುದಿಲ್ಲ. ಮೃಗೀಯವಾಗುತ್ತದೆ. ಅಧಿಕಾರದ ಜೊತೆಗೆ ಹಿಂಸೆ ಮತ್ತು ರಕ್ತದ ವಾಸನೆಯು ಬಂದರೆ ಸಹಿಸುವುದೇ ಅಸಾಧ್ಯವೆಂದು ನನ್ನ ಭಾವನೆಯಾಗಿದೆ. ರಾಜಕಾರಣದಲ್ಲಿ ಚದುರಂಗದ ನಡೆಯು ಉಪಯುಕ್ತವಲ್ಲ.ಅದನ್ನು ಅದು ಮೀರಬೇಕು. ನಾಟಕ ಬರೆಯಲು ಕಾರಣವಾದ ಸನ್ನೀವೇಷವಿದು.

ಪ್ರೀತಿಯ ಪಿ.ವಿ.ಭಂಡಾರಿಯವರಿಗೆ, ಪ್ರಕಟಿಸುತ್ತಿರುವ ಓಂಕಾರಪ್ಪರಿಗೆ, ಮತ್ತು ಸಬಿತ; ನಹುಷ; ನಿಯತಿಯರಿಗೆ, ಬೆರಳಚ್ಚು ಮಾಡಿದ ಶ್ರೀಮತಿ ಅರ್ಪುದ ಮೇರಿ, ತಿದ್ದುಪಡಿ ಮಾಡಿದ ಪುಷ್ಪಕಾಮತ್ ಮತ್ತು ವಿಜಯಕುಮಾರ್.ಹೆಚ್.ಜಿ ಅವರಿಗೆ ವಂದನೆಗಳು.

## ಪೀಠಿಕಾ ದೃಶ್ಯ

[ಅಜ್ಜಿ ಎಲೆ ಕುಟ್ಟುತ್ತಾ ಕೂತಿರುತ್ತಾಳೆ. ಅಲ್ಲಿಗೆ ಮಕ್ಕಳು ಬರುತ್ತಾರೆ]

ಅಜ್ಜಿ : ಏನು ಮಕ್ಕಳೆ? ನಿಮ್ಮ ಬಾಯಿಗೆ ಎಕ್ಕಳೆ, ಯಾಕೆ ಬಂದಿರಿ ಅಂತ ನಂಗೊತ್ತು.

ಮಗು : ಯಾಕೆ?

ಅಜ್ಜಿ : ಬೆನ್ನು ತುರಿಸೋಕೆ.

ಮಗು -2 : ಬೆನ್ನು ಯಾಕೆ ತುರಿಸ್ಬೇಕು?

ಅಜ್ಜಿ : ವಯಸ್ಸಾದ ಮೇಲೆ ಬೆನ್ನು ತುರಿಸುತ್ತೆ. ಕಾಲು ನಡುಗುತ್ತೆ. ಕಾಡು ಬಾ ಅನ್ನುತ್ತೆ ಊರು ಹೋಗು ಅನ್ನುತ್ತೆ.

ಮಗು -3 : ಊರು ಯಾಕೆ ಹೋಗು ಅನ್ನುತ್ತೆ?

ಅಜ್ಜಿ : ಊರಿಗೆ ನಾವು ಬೇಡ-ಅಷ್ಟೆ!

ಮಗು : ಕಾಡಲ್ಲಿ ನೀನೇನು ಮಾಡ್ತೀಯಾ?

ಅಜ್ಜಿ : ಇಲ್ಲಿ ಬಾ. ನಾನೇನು ಮಾಡ್ತೀನಿ ಅಂತ ಹೇಳ್ತೀನಿ-ಮೊದ್ಲು ನನ್ನ ಬೆನ್ನು ತುರ್ಸು.

ಮಗು - 2 : ನಿನ್ನ ಬೆನ್ನು ತುರಿಸ್ತೇನೆ. ನಂಗೇನು ಕೊಡ್ತೀಯಾ?

ಅಜ್ಜಿ : ಬೆನ್ನು ತುರಿಸಿದವನಿಗೆ ಬೆಲ್ಲದ ತುಂಡು.
ಬಾಯಿ ಬಿಟ್ಟವನಿಗೆ ಬೇವಿನ ತುಂಡು
ನೀವೆಲ್ಲ ತುಂಡು. ನಾನು ಮಾತ್ರ ಮೊಂಡು. ಬಲು ಮೊಂಡು

ಮಗು -3 : ನಾವ್ಯಾರೂ ನಿನ್ನ ಬೆನ್ನು ತುರಿಸೋಲ್ಲ, ಹೋಗು.

ಅಜ್ಜಿ : ಇಲ್ಲಿ ಬಾ ನನ್ನ ಕಂದ-ನೀವು ಬೆಸ್ನು ತುರಿಸುವುದು ಬೇಡ. ಓ-ಅಲ್ಲಿ ಅಗ್ಗಿಷ್ಟಿಕೆಯಿದೆಯಲ್ಲ. ಅದನ್ನು ತಾ. ಚಳಿ ಅಂದ್ರೆ ಚಳಿ. ಹೊಗೆಸೊಪ್ಪು ದವಡೆಯಲ್ಲಿಟ್ಟರೂ ಚಳಿ ಹೋಗೋಲ್ಲ. ಚಳಿಗೆ ಹೊತ್ತು-ಗೊತ್ತು ಒಂದೂ ಗೊತ್ತಿಲ್ಲ. (ಮಗುವಿನ ಗಲ್ಲ ತಟ್ಟಿ) ಹೋಗು ಪುಟ್ಟ, ನನ್ನ ಚಿನ್ನ ಅಗ್ಗಿಷ್ಟಿಕೆ ತಾ.

ಮಗು : ತಂದ್ರೆ ನಂಗೇನು ಕೊಡ್ತೀಯಾ?

ಅಜ್ಜಿ : (ಕೈಯ ಲಟಿಕೆ ಮುರಿದು) ಕೊಡೋಕೆ ನನ್ನತ್ರ ಏನಿದೆ ಮಣ್ಣು?

ಮಗು : (ಅಗ್ಗಿಷ್ಟಿಕೆಯನ್ನು ತಂದಿಟ್ಟು) ಹ್ಹಾಂ ತಂದಿಟ್ಟೆ.

(ಮಕ್ಕಳೆಲ್ಲಾ ಅಗ್ಗಿಷ್ಟಿಕೆಯ ಸುತ್ತ ಕುಳಿತು ಅಜ್ಜಿಗೆ ಜಾಗ ಕೊಡುವುದಿಲ್ಲ.)

ಮಕ್ಕಳು : ನೀವು ಅಲ್ಲಿ-ನಾವು ಇಲ್ಲಿ. ನಿಮಗೆ ಚಳಿ. ನಮಗೆ ಬಿಸಿ.

ಅಜ್ಜಿ : ನಂಗೆ ಚಳಿಯೋಡಿಸಲು ಉಪಾಯ ಗೊತ್ತು. ಅದನ್ನು ಹೇಳೋಲ್ಲ.

ಮಕ್ಕಳು : ಹೇಳಜ್ಜಿ.

ಅಜ್ಜಿ : ಅದಾ ಇದಾ

ಮಕ್ಕಳು : ಹೇಳಿ-ಬೇಗ ಹೇಳಿ.

ಅಜ್ಜಿ : (ಎದ್ದು ನಿಂತು) ಹೊಟ್ಟೆಯಲುಂಟು. ಬಾಯಿಗೆ ಬರ್‍ತಿಲ್ಲ.

ಮಗು : ನಾಟಕ ಆಡ್ಬೇಡಿ ಅಜ್ಜಿ.

ಅಜ್ಜಿ : ಒಳಗಿನಿಂದ ಹಲಸಿನ ಬೇಳೆ ತಂಗೊಂಡು ಬನ್ನಿ. ಅದನ್ನು ಸುಟ್ಟು ತಿಂದ್ರೆ ನೆನಪಿಗೆ ಬರುತ್ತೆ.

ಮಕ್ಕಳು : (ಕುಣಿಯುತ್ತಾ) ಒಳ್ಳೆ ಉಪಾಯ
ಒಳ್ಳೆ ಉಪಾಯ

(ಒಳಗೆ ಹೋಗುವರು. ಅಜ್ಜಿ ಅಗ್ಗಿಷ್ಟಿಕೆಯ ಹತ್ತಿರ ಬಂದು ಕುಳಿತುಕೊಳ್ಳುವಳು.)

ಅಜ್ಜಿ : ಅದನ್ನು ಬೆಂಕಿಗೆ ಹಾಕಿ, ಸುಟ್ಟು ಕೊಡ್ತೇನೆ. ಚಳಿ ಕಾಯಿಸೋಕೆ ನಂಗೂ ಜಾಗ ಆಯ್ತು.

(ಮಕ್ಕಳಿಗೆ ಸಿಟ್ಟು ಬಂದು ಅಜ್ಜಿಯ ಬೆನ್ನಿಗೆ ಗುದ್ದುವರು)

ಅಜ್ಜಿ : ತಡೀರಿ ತಡೀರಿ.

ಮಕ್ಕಳು : ಹಾಗಿದ್ರೆ ಕತೆ ಹೇಳು.

ಅಜ್ಜಿ : ಕತೆ ಹೇಳ್ತಿನಿ. ಆದ್ರೆ ನೀವು 'ಹ್ಞಾಂ'ಅನ್ಬೇಕು.

ಮಗು : ಹ್ಞಾಂ

ಅಜ್ಜಿ : ಹ್ಞಾಂ ಅಂದ್ರೆ ಕತೆ ಬರುತ್ತಾ?

ಮಗು 2 : ಹ್ಞಾಂ

ಅಜ್ಜಿ : ಹ್ಞಾಂ ಅಂದ್ರೆ ಕತೆ ಮುಗಿಯುತ್ತಾ?

ಮಗು3 : ಹ್ಞಾಂ

ಅಜ್ಜಿ : ಇಲ್ಲಿಗೆ ಕತೆ ಮುಗಿಯಿತು. ಹೋಗಿ ಊಟ ಮಾಡಿ ಬನ್ನಿ. ನಾನು ಹಲಸಿನ ಬೇಳೆ ತಿಂತೇನೆ.

ಮಕ್ಕಳು : ಮೋಸ ಮೋಸ.

ಅಜ್ಜಿ : ಸರಿ. ಸರಿ. ಕಿರುಚಾಡಬೇಡಿ. ಕತೆ ಹೇಳ್ತಿನಿ. ಒಂದು ರಾಜ್ಯದಲ್ಲಿ ಒಬ್ಬ ನವಾಬನಿದ್ದನಂತೆ

(ಕತ್ತಲೆ)

# ದೃಶ್ಯ 1

(ನವಾಬ ಮತ್ತು ಸಖಿ ರಂಗದಲ್ಲಿದ್ದಾರೆ.)

ನವಾಬ : ನನಗೆ ಗೊತ್ತು. ನೀವು ನಂಬುವುದಿಲ್ಲ. ನೀವು ಯಾವುದನ್ನು ನಂಬುವ ಸ್ಥಿತಿಯಲ್ಲಿ ಇಲ್ಲ. ಅಸತ್ಯವನ್ನು ಹೊಳೆಯುವ ಹಾಗೆ ಹೇಳುವ ಬೇಗಂ ತನ್ನ ಸೌಂದರ್ಯದಂತೆ ಸತ್ಯವನ್ನು ಮರೆಮಾಡಿ ಬಿಟ್ಟಿದ್ದಾಳೆ- ತನ್ನ ಕಪ್ಪು ಗೌನಿನಲ್ಲಿ. ಅದು ಎಂದು ಹೊರ ಜಗತ್ತಿಗೂ ಕಾಣಿಸುವುದಿಲ್ಲ. ಆ ದಿನ ಅದು ನಡೆಯದಿದ್ದರೆ ನನಗೂ ತಿಳಿಯುತ್ತಿರಲಿಲ್ಲ. ಅವಳ ಆತ್ಮ ಪ್ರತಿಷ್ಠೆಯನ್ನು ತುಳಿದ ಮೇಲೆ ತಿಳಿಯಿತು.

ಸಖಿ : ಅಂದರೆ - ನವಾಬ: ಅವಳು ಲಜ್ಜೆಗೆಟ್ಟ ಹೆಂಗಸು. ರತಿವಾಂತ ಕುದುರೆ.

ನವಾಬ : ಅಂದರೆ -ಅನ್ನುವುದಕ್ಕೆ ಅನೇಕ ಸಂದರ್ಭದಲ್ಲಿ ಅರ್ಥವಿರುವುದಿಲ್ಲ. ಜನ ಅಸತ್ಯವನ್ನು; ಕಲ್ಪನೆಯನ್ನು; ರೋಮಾಂಚನಗೊಳಿಸುವ ಕತೆಯನ್ನು ಬೇಗನೆ ನಂಬುತ್ತಾರೆ. ಆದರೆ ತಲೆಗೆ ಚುಚ್ಚುವ ಸತ್ಯವನ್ನಲ್ಲ. ಅದರಲ್ಲಿಯೂ ಸುಂದರಿಯ ಕೆಂಪು ತುಟಿಯ ನಡುವೆ: ಬಿಳಿಯ ಹಲ್ಲು ತೋರಿಸಿ ನಗುವಾಗ ಸುಳ್ಳು ಸರ್ಪದಂತೆ ಹೆಡೆಯಾಡುತ್ತದೆ. ಚೆಂದ ಕಾಣಿಸುತ್ತದೆ.

ಸಖಿ : ನೀವು ಈಗ ಏನೂ ಅನ್ನಬಾರದೆಂದು ವೈದ್ಯರು ಹೇಳಿದ್ದಾರೆ. ದಣಿವಾರಿಸಿಕೊಳ್ಳಿ ಆರೋಗ್ಯ ಮುಖ್ಯ.

ನವಾಬ : (ಮೇಲೆ ನೋಡುತ್ತಾ)ಮೇಲಿರುವ ಚಂದ್ರನಿಗೂ ಆರೋಗ್ಯ ಕೆಡುತ್ತದೆ. ಮಳೆಗಾಲದಲ್ಲಿ ತುಂಬಿ ಹರಿಯುವ ನದಿ ಬತ್ತಿ ಕಂಗಲಾಗುತ್ತದೆ.

ವೃಕ್ಷ ಸಂಕಲಗಳು ಬೇಸಿಗೆ ಬಿಸಿಲಲ್ಲಿ ವೃದ್ಧರಂತೆ ನಿಟ್ಟುಸಿರು ಬಿಟ್ಟು ಉಬ್ಬಸದಿಂದ ಬಸವಳಿಯುತ್ತವೆ. ಆಗ ಯಾರೂ ಕ್ಷೇಮ ಸಮಾಚಾರವನ್ನು ವಿಚಾರಿಸುವುದಿಲ್ಲ ಗೊತ್ತೆ?

ಸಖಿ : ನೀವೂ ಖಿನ್ನರಾಗಿದ್ದೀರಿ.

ನವಾಬ : (ಕುಳಿತುಕೊಂಡು) ಇಲ್ಲಿ ಬಾ. ನನ್ನ ಕಣ್ಣುಗಳನ್ನು ನೋಡು.

ಸಖಿ : (ಹತ್ತಿರ ಬಂದು) ನೋಡಿದೆ.

ನವಾಬ : ಏನು ಕಾಣಿಸುತ್ತದೆ?

ಸಖಿ : ಕಣ್ಣು ಪಾತಾಳಕ್ಕೆ ಇಳಿದಿದೆ. ರೆಪ್ಪೆಯ ಸುತ್ತ ಕಪ್ಪು ಕಲೆಗಳು.

ನವಾಬ : ತಪ್ಪು ಸರಿಯಾಗಿ ನೋಡು.

ಸಖಿ : (ಮತ್ತೊಮ್ಮೆ ನೋಡಿ) ಕಣ್ಣಿನಲ್ಲಿ ಬೆಳಕಿಲ್ಲ. ಅಷ್ಟು ಅರ್ಥವಾಗುತ್ತದೆ.

ನವಾಬ : (ತನ್ನ ಕಣ್ಣ ರೆಪ್ಪೆಯನ್ನು ತಾನೇ ಅಗಲಿಸಿ) ಈಗ ನೋಡು- ಏನಾಗಿದೆ ಇದಕ್ಕೆ? ಗಮನಿಸು.

ಸಖಿ : ಸತ್ಯ ಹೇಳಲಾ?

ನವಾಬ : ಸತ್ಯ ಹೇಳಲಾ?

ನವಾಬ : (ಸಿಟ್ಟಿನಿಂದ) ಸತ್ಯ-ಸತ್ಯ ಬೊಗಳು-ನಾಯಿ ಬೊಗಳಿದಂತೆ.
ಸುಳ್ಳು ಅರಚಬೇಡ ಬೇಗಮ್ಮನಂತೆ.
ಅದು ಇಷ್ಟವಿಲ್ಲ.

ಸಖಿ : ದುಡಿದು-ದುಡಿದೂ ಕಣ್ಣು ಕೆಂಪೇರಿದೆ.
ಧೂಳು ಕಣ್ಣಿಗೆ ಬಿದ್ದ ಹಾಗೆ;
ಹೊಗೆಯಲ್ಲಿ ಕುಳಿತ ಹಾಗೆ;
(ಕುಣಿಯುತ್ತಾ)
ತುಂಬಾ ಹೊತ್ತು ತಣ್ಣೀರಲ್ಲಿ ಈಜಿದ ಹಾಗೆ;
ರಾತ್ರಿಯಿಡೀ ಯಕ್ಷಗಾನದಲ್ಲಿ
ತಾ-ತೈ-ತಕಧಿಮಿ ತ್ತಾಂ- ತ್ತೋಂ ಧಿ ಧಿತ್ತೈ
ಒಂದು- ಎರಡು- ಮೂರು- ನಾಕು- ಐದು- ಆರು- ಏಳು- ಎಂಟು; ಪಲ್ಯಕೆದಂಟು
ಊಟಕೆ ಮಾತ್ರ ಬಾಳೆಲೆ ಹಾಕು.

ಕುಣಿಯಲು ಮಾತ್ರ ಹೆಂಗಸುಬೇಕು.

ಒಂದು-ಎರಡು- ಮೂರು-ನಾಕು. ಊಟಕೆ ಮಾತ್ರ ಸಾರು ಸಾಕು.

ಒಂದೊಂದ್ಲಿ ಒಂದು. ಒಂದೆರಡ್ಲಿ ಎರಡು. ಬಾಳೆಲೆ ಹರಡು

ಊಟದ ಆಟಕೆ

ನವಾಬ : (ಎದ್ದು ನಿಂತು ಸಿಟ್ಟಿನಿಂದ) ಸಾಕು ನಿಲ್ಲಿಸು. ನಾಟಕ !

ನಾಟಕ ಅಂದ್ರೆ ನಂಗೆ ಆಗೋಲ್ಲ. ಸತ್ಯಹೇಳು!

ಸಖಿ : ನಿಮ್ಮನ್ನು ಖುಷಿ ಪಡಿಸಲು ಕುಣಿದೆ.

ನವಾಬ : ನನ್ನ ಖುಷಿ ಪಡಿಸಲು

ಸಖಿ : ಹ್ಞೂಂ-ಹೌದು.

ನವಾಬ : ಖುಷಿ-ನೆಮ್ಮದಿ.

ಸಖಿ : ಅದೇ-ಅದೇ.

ನವಾಬ : ಎಲ್ಲಿದೆ?

ಸಖಿ : (ತಟಕ್ಕನೆ ಚಕ್ಕಳ ಮಕ್ಕಳ ಹಾಕಿ ಕುಳಿತುಕೊಂಡು) ಇಲ್ಲಿದೆ. ಕಣ್ಣ ಮುಚ್ಚಿ ಕುಳಿತುಕೊಳ್ಳಬೇಕು. ಮನಸ್ಸು ಏಕಾಗ್ರಬೇಕು. ಒಂದು ಮೂಗಿನಲ್ಲಿ ನಿಧಾನವಾಗಿ ಉಸಿರುಬಿಡಬೇಕು. ಆತ್ಮವಿದ್ಯೆಯಿದು. ನಾನು ಇದನ್ನು ತುಂಬಾ ಜನರಿಗೆ ಕಲಿಸಿದ್ದೇನೆ. ಕಲಿತವರು ಕಾಲಿಗೆ ಅಡ್ಡಬಿದ್ದರು. ಮತ್ತೆ ಏಳಲಿಲ್ಲ. ಮತ್ತೆ ಕೆಲವರು ದುಡ್ಡು ಸುರಿದರು. ಗುರೂಜಿ ಅಂದರು. ದೇವರು ಅಂದರು. ಬಾಬ ಅಂದರು. ಮನೆ ಹೋಗಿ ಮಠ ಆಯ್ತು. ಕಣ್ಣು ಮುಚ್ಚಿ ಕುಳಿತು ಒಂದು ಮೂಗಿನಲ್ಲಿ ಉಸಿರುಬಿಟ್ಟರೆ ಮನೆ-ಮಠವಾಗುತ್ತದೆ. ಆತ್ಮವಿದ್ಯೆ – ಯೋಗವಿದ್ಯೆ.

ಓಂ, ಹ್ಞೂಂ, ಹ್ಞೂಂ, ಓಂ, ಹೇಳಿದರೆ ಸಾಕು.

ಬೊಜ್ಜು ಬೆಳೆಯುತ್ತದೆ. ಸೊಂಟ ಆನೆಯ ಥರಾ ಆಗುತ್ತೆ.

ನವಾಬ : (ಅವನ ಕಾಲಿನ ಮೇಲೆ ತನ್ನ ಕಾಲನ್ನು ಇಟ್ಟು) ನಿನ್ನ ಸೊಂಟಕ್ಕೆ ಎಡಗಾಲಿಗೆ ಒದ್ದರೆ ಸೊಂಟ ಕಳೆದುಕೊಂಡ ನಾಯಿ ಥರಾ ಆಗುತ್ತೆ. ಈಗ ನಿಜ ಹೇಳು.

ಸಖಿ : (ಕೈ ಮುಗಿದು) ತಪ್ಪಾಯ್ತು. (ಸ್ವಗತ) ಅಧಿಕಾರಸ್ಥರ ಎದುರು ನಿಲ್ಲುವುದು ತಪ್ಪು. ಕತ್ತೆಯ ಹಿಂದೆ ಕೂಡಾ ತಗ್ಗಿ ಬಗ್ಗಿ ನಡೆಯಬೇಕು.

ಅವರ ಚಪ್ಪಲಿ ನೆಕ್ಕಬೇಕು. ದಿನಕ್ಕೊಂದು ಬಣ್ಣದ ಮಾತು; ಹೊಗಳಿಕೆಯ ಪರಾಕು. ಅಧಿಕಾರಸ್ಥರಿಗೆ ಕಣ್ಣಿಲ್ಲ. ಕಿವಿಯಿಲ್ಲ. ಮೂಗಿಲ್ಲ. ನಾಲಿಗೆಯಿಲ್ಲ. ಆದರೂ ಇದೆಲ್ಲಾ ಅವರಿಗೆ ಕೇಳಿಸುತ್ತದೆ. (ಮುಂದೆ ಬಂದು) ಸತ್ಯ ಹೇಳುತ್ತೇನೆ-ನಿಮ್ಮ ಕಣ್ಣುಗಳಲ್ಲಿ ಭಯವಿದೆ.

ನವಾಬ : ಮತ್ತೆ ಸುಳ್ಳು

ಸಖಿ : ಇಲ್ಲ- ಸತ್ಯವನ್ನೇ ಹೇಳ್ತೇನೆ- ನಿಮಗೆ ನಿಮ್ಮ ಹೆಂಡತಿಯ ಭಯ. ನಿಮ್ಮ ಅಧಿಕಾರ ಉಳಿಸಿಕೊಳ್ಳುವ ಆತಂಕ.

ನವಾಬ : (ಅವನ ಕೈ ಹಿಡಿದು) ನೋಡು- ಈಗ ನನ್ನ ಕಣ್ಣುಗಳಲ್ಲಿ ಪ್ರೇತಗಳು ಕುಣಿಯುತ್ತಿವೆ. ಕಿವಿಯಸುತ್ತ ಯಾವುದೋ ಕೇಕೆಧ್ವನಿ. ಕರುಳು ಹಿಂಡುವಯಾತನೆ. ತಡೆಯಲಾರೆ. ಭಯವಾಗುತ್ತದೆ. ಇಲ್ಲಿ ಬಾ. ನನ್ನ ಉಳಿಸು. (ಅವನ ಕಾಲಿಗೆ ಬಿದ್ದು)

ನನ್ನ ಜೀವವುಳಿಸು. ಬದುಕಿ ಉಳಿಯುವ ದಾರಿ ಕಾಣುವುದಿಲ್ಲ. ಖಂಡಿತಾ ಅವಳು ನನ್ನನ್ನು ಕೊಲ್ಲುತ್ತಾಳೆ ನಿಧಾನವಾಗಿ ವಿಷವುಣಿಸಿ. ಅವಮಾನ ಮಾಡಿ ಡಂಗುರ ಹೊಡೆದು, ನನ್ನ ನಿಲುವಂಗಿಯನ್ನು ತೊರೆದು-ಉಳಿಯಲಾರೆ ಗೆಳೆಯ ಉಳಿಸು-ಉಳಿಸು.

ಸಖಿ : (ರಾಜನಂತೆ ನಟಿಸುತ್ತಾ) ಕಾಲಿಗೆ ಅಡ್ಡ ಬಿದ್ದವರನ್ನು ರಕ್ಷಿಸುವುದು ರಾಜಧರ್ಮ. ನಿಮ್ಮ ಜೀವನವನ್ನು ನನ್ನ ಧೋತ್ರದಲ್ಲಿ ಗಂಟು ಹಾಕಿ ರಕ್ಷಿಸಿಕೊಳ್ಳುತ್ತೇನೆ. ನನ್ನ ಗಾಯತ್ರಿ ಮಂತ್ರದಲ್ಲಿ ಶತ್ರುಗಳನ್ನು ನಾಶಗೊಳಿಸುತ್ತೇನೆ.

ಗಾಯತ್ರಿ ಮಂತ್ರಕ್ಕೆ ಶತ್ರು ನಾಶದ ಶಕ್ತಿಯಿದೆ. ಬಿದಿರ ಮೆಳೆಯಲ್ಲಿ ಗಟ್ಟಿಯಾಗಿ ಅಳುತ್ತಿದ್ದ ಗಾಯತ್ರಿ ದೇವಿಯನ್ನು ವಿಶ್ವಾಮಿತ್ರ ಬ್ರಹ್ಮ ಬಲದಿಂದ ಬಿಡಿಸಿ ತನ್ನ ಜನಿವಾರದ ಅಷ್ಟಗಂಟುಗಳಲ್ಲಿ ಕಟ್ಟುಹಾಕಿದ. ಓಂ ಭೂರ್ ಭುವಃ ಸ್ವಃ -ನಿಮಗೆ ಗೊತ್ತೆ? ಸಾಬರಿಗೆ ಗಾಯತ್ರಿಯ ಶಕ್ತಿ ಗೊತ್ತಾಗೊಲ್ಲಾ.

ನವಾಬ : ಅದು ಹಾಳಾಗಿ ಹೋಗಲಿ. ನಿಮಗೆ ಗಾಯತ್ರಿ ಮಂತ್ರ, ನನಗೆ ಅಲ್ಲಾಹು. ಎಲ್ಲಾ ಒಂದೇ. ಮನಸ್ಸಿನಲ್ಲಿ ಕೊಳೆಯುವ ಹೆಣದ ವಾಸನೆಗಳನ್ನು ಇಟ್ಟುಕೊಂಡು ಏನು ಮಾಡಿದರೂ ಪ್ರಯೋಜನವಿಲ್ಲ.

ಸಖ : ಸ್ನಾನ ಮಾಡಿ. ಮಡಿಯುಟ್ಟು. ಮಂತ್ರ ಪಠಿಸಬೇಕು. ಭೂತ ಪ್ರೇತಗಳು ಮಾರು ದೂರ ಹೋಗುತ್ತವೆ.

ನವಾಬ : ನಾವು ಅದನ್ನು ನಂಬುವುದಿಲ್ಲ.

ಸಖ : ನಂಬಿಕೆ ಮನಸ್ಸಿಗೆ ಬಿಟ್ಟಿದ್ದು.

ನವಾಬ : ಮನುಷ್ಯರನ್ನು ದೈವವನ್ನು: ಎಲ್ಲವನ್ನೂ ನಂಬುವುದು ಬಿಟ್ಟಿದ್ದೇನೆ. ನಾನೀಗ ನಿರೀಶ್ವರವಾದಿ (ತನ್ನ ಕೈಗಳನ್ನು ಚಾಚಿ) ನನ್ನ ಕೈ ಕಣ್ಣುಗಳಿಗೆ ಮೋಸ ಮಾಡುತ್ತೆ.

ಸಖ : ಅದು ನಿಮ್ಮ ದುರ್ಬಲ ಮನಸ್ಸು ಅಷ್ಟೆ!

ನವಾಬ : ಹಾಗಲ್ಲ. ನಿನ್ನ ಎಡಗೈ ನಿನ್ನ ಬಲಗೈಯನ್ನು ನಂಬಲ್ಲ.

ಸಖ : ನಂಬುತ್ತೆ. ಖಡಾಖಂಡಿತವಾಗಿ ನಂಬುತ್ತೆ. ನೋಡಿ – (ತನ್ನ ಎಡಗೈಯನ್ನು ಮೇಲೆತ್ತುತ್ತಾನೆ) ಈಗ ಬಲಗೈಗೆ ಹೇಳುತ್ತೇನೆ ಕೈ ಮೇಲೆ ಹೋಗು (ಬಲಗೈಯನ್ನು ಮೇಲೆತ್ತುತ್ತಾನೆ) ಅಷ್ಟೆ. ಇದು ಸತ್ಯ.

ನವಾಬ : ಸತ್ಯ ಕಣ್ಣಿಗೆ ಕಾಣುವಷ್ಟು ಸರಳವಲ್ಲ. ಅದು ಕಬ್ಬಿಣದ ಸುಡುಸುಡುವ ಕೆಂಪನೆಯ ಸರಳು. ಸುಟ್ಟು ಬೂದಿ ಮಾಡಿಬಿಡುತ್ತೆ. ಆವಾಗ ನಿನ್ನ ಬ್ರಹ್ಮಗಂಟಿಗೆ ಮೂರು ಕವಡೆ ಕಾಸಿನ ಕಿಮ್ಮತ್ತಿಲ್ಲ.

ಸಖ : ತಲೆ ಚಿಟ್ಟು ಹಿಡಿಯುತ್ತದೆ.

ನವಾಬ : ಏನೂ ಬೇಡ. ಇಲ್ಲಿ ಬಾ. ನನ್ನ ಪಕ್ಕದಲ್ಲಿ ಕುಳಿತಕೋ. ನಾನು ನಿನಗೊಂದು ಕಥೆಯನ್ನು ಹೇಳುತ್ತೇನೆ.

ಸಖ : ಅಡುಗೂಲಜ್ಜಿಯ ಕತೆಯಾ? (ಆಕಳಿಸಿ) ಇಂಥ ಕತೆ ಬೇಡಪ್ಪ. ಕತೆ ಹೇಳಿದರೆ ರೋಮ ರೋಮಗಳು ನವಿರೆದ್ದು ಕುಣಿಯಬೇಕು.

ನವಾಬ : ಅಡುಗೂಲಜ್ಜಿಯ ಕತೆ ಹೇಳಲು ನನಗೂ ಮನಸ್ಸಿಲ್ಲ.

ಸಖ : (ಕುತೂಹಲದಿಂದ ನವಾಬನ ಹತ್ತಿರ ಬಂದು) ಪ್ರೇಮ ಕತೆಯೆ? ಹಾಗಿದ್ದರೆ ಸರಿ. ಒಬ್ಬಳು ಸುಂದರಿ ಒಬ್ಬ ಸುಂದರ; ಅವರಿಬ್ಬರ ನಡುವೆ ಪ್ರೇಮ; ಅವರಿಬ್ಬರು ಮರ ಸುತ್ತುತ್ತಾರೆ. ಆಗ ಮಳೆ ಬರುತ್ತದೆ. ಸುಂದರಿಯ ಮೈ ಮೇಲೆ ನೀರು ಬೀಳುತ್ತದೆ. ಆಹಾ.... ರೋಮಾಂಚನ.... ಪುಳಕ (ರಂಗದ ಮುಂದೆ ಬಂದು) ಪ್ರೇಮ ಅಮರ ಕಾವ್ಯ ಎಷ್ಟೊಂದು ಚಂದ. ಜೀವ ಜಗತ್ತಿನಲ್ಲಿ ಯಾವುದಕ್ಕೆ

ಬರ ಬಂದರೂ ಪ್ರೇಮಿಗಳಿಗೆ ಮಾತ್ರ ಬರಗಾಲವಿಲ್ಲ. ಸಂಜೆಯಾದರೆ ಸಾಕು ಪ್ರತಿಯೊಂದು ಗಿಡ ಮರಗಳ ಕೆಳಗೆ ಅಮರ ಜೋಡಿಗಳು ಕಳೆದುಕೊಳ್ಳುವುದನ್ನು ಕಂಡಿದ್ದೇನೆ. ಇಂಥ ಕತೆ ಬೇಕಪ್ಪ (ತಿರುಗಿ ಮತ್ತೆ ನವಾಬನ ಹತ್ತಿರ ಓಡಿ ಬಂದು) ಪ್ರೇಮ ಕತೆ ಹೇಳ್ತಿರಾ?

ನವಾಬ : (ಹಿಂತಿರುಗಿ ನಿಂತು) ಇಲ್ಲ. ಅದು ಪ್ರೇಮವೇ? ಕಾಮವೇ? ದ್ವೇಷವೇ?.... ಅತೃಪ್ತಿಯೇ?....

ಒಂದೂ ಅರ್ಥವಾಗದ ಲೆಕ್ಕಶಾಸ್ತ್ರ. ಕೂಡಿಸಿ ಕಳೆದೆ. ಬಾಗಕಾರ ಮಾಡಿದೆ. ಕೊನೆಗೂ ಸರಿಯಾದ ಉತ್ತರ ದೊರೆಯಲಿಲ್ಲ. ಆದರೂ ಹೇಳುತ್ತೇನೆ. ಒಂದು ದಿನ.......

ಸಖಿ : ಎಲ್ಲಾ ಕತೆಯೂ ಇಲ್ಲಿಂದಲೇ ಶುರುವಾಗುತ್ತದೆ.

ನವಾಬ : ಮಧ್ಯೆ ಬಾಯಿ ಹಾಕಬೇಡ.

ಸಖಿ : ಒಂದು ದಿನ. ಒಂದು ಊರಿನಲ್ಲಿ ಒಬ್ಬ ಅರಸನಿದ್ದನು. ಅವನಿಗೆ ಒಬ್ಬಳು ರಾಣಿ ಇದ್ದಳು. ಅವಳು ತುಂಬಾ ಸುಂದರಿ ಅಲ್ಲವೇ ?

ನವಾಬ : ಅಲ್ಲ.

ಸಖಿ : ಮತ್ತೆ

ನವಾಬ : ಒಂದು ದಿನ ಯಾಕೆ? ಸರಿಯಾಗಿ ಸ್ಪಷ್ಟವಾಗಿಯೇ ಹೇಳುತ್ತೇನೆ.

ಸಖಿ : ನಾನೂ ಸ್ಪಷ್ಟವಾಗಿಯೇ ಹೇಳುತ್ತೇನೆ. ಕಾಲು ಒತ್ತಲಾ? ದ್ರಾಕ್ಷಾರಸ ತರಲಾ? ಅಫೀಮು ಬೇಕಾ?

ನವಾಬ : ಕತೆ ಹೇಳುವವರು ಎಲ್ಲವನ್ನು ಅಮಲಲ್ಲಿಯೇ ಹೇಳುವುದಿಲ್ಲ.

ಸಖಿ : ಕತೆ; ದ್ರಾಕ್ಷಾರಸ; ಹೆಣ್ಣಿನ ಪ್ರೇಮ; ಅಧಿಕಾರ ಎಲ್ಲವೂ ಅಮಲು ಅಂತಾರೆ.

ನವಾಬ : ಕುದುರೆಯ ಮೂತ್ರ; ಆನೆಯಲದ್ದಿ; ಗೇರು ಹಣ್ಣು; ಬೆವರಿನ ವಾಸನೆಯು ಅಮಲೇರಿಸುತ್ತವೆ ಗೊತ್ತಾ? ಯೌವನದ ಮದವೂ ಅಮಲು, ಅದೆಲ್ಲಾ ಬೇಡ. ನಿಧಾನವಾಗಿ ವಿಷವೇರಿದಾಗ ಅದು ಕೂಡಾ ಮತ್ತೇರಿಸುತ್ತದೆ. ಕತೆ ಬೇಕಾ ಕೇಳು ಅಷ್ಟೆ!

ಸಖಿ : ಸರಿ. ಹೇಳಿ.

ನವಾಬ : ಸರಿಯಾಗಿ ನಲವತ್ತೆಂಟು ವರ್ಷದ ಕೆಳಗೆ ಶುಕ್ರವಾರ-ಸಂಜೆ ಮಸೀದಿಯಲ್ಲಿ ನಮಾಜು ಮಾಡುತ್ತಿದ್ದರು ಆ ನನ್ನ ಮುಸ್ಲಿಂ ಬಾಂಧವರು. ಬೆನ್ನು ಬಾಗಿದ್ದವು. ಅವರು ಬೊಗಸೆಯನ್ನು ಚಾಚಿ ಅಲ್ಲಾಹುವಿಗಾಗಿ ಪ್ರಾರ್ಥನೆಯನ್ನು ನಡೆಸುತ್ತಿದ್ದರು. ಅವರ ಬಾಂಗಿನ ಧ್ವನಿಯು ಮುಗಿಲೆತ್ತರ ಮುಟ್ಟಿ. ಗಾಳಿಯಲ್ಲಿ ಹಾರಾಡಿ ಎಲ್ಲರ ಕಿವಿಯನ್ನು ಇಂಪಾಗಿ ತಲುಪಿರುವ ವೇಳೆಯದು. ಮೆಲ್ಲನೆ ಗಾಳಿಯು ಮಲ್ಲಿಗೆ ಬಳ್ಳಿಯನ್ನು ಮುಟ್ಟಿ ಮುಟ್ಟಿ, ಬೀದಿಯಲ್ಲಿ ಕಾಲ್ನಡಿಗೆಯಲ್ಲಿ ಹೊರಟಿತ್ತು. ಆಗ-

ಸಖ : ಆಗ-?

ನವಾಬ : (ಅವನ ಹತ್ತಿರದ ಬಂದು. ಸಖನ ಎರಡೂ ತೋಳುಗಳನ್ನು ಕುಲುಕಿಸಿ) ನೋಡು ಇದೇ ಕಣ್ಣುಗಳಿಂದ – ಈ ಕಣ್ಣುಗಳಿಂದಲೇ – ನಿಜ ಹೇಳ್ತಿನಿ. ನೀನು ನಂಬುವುದಿಲ್ಲ. ನೀನಲ್ಲ ಇಡೀ ಜಗತ್ತಿನ ಸಮಸ್ತ ಜನತೆಯೇ ನಂಬುವುದಿಲ್ಲ. ಆದರೆ ನಾನು ನೋಡಿದ್ದು ಸತ್ಯ; ಅನುಭವಿಸಿದ್ದು ಸತ್ಯ. ಅದು ಮಿಥ್ಯೆಯಲ್ಲ. ಆ ಶುಕ್ರವಾರ ಅರೆಗತ್ತಲಲ್ಲಿ ಇನ್ನೂ ಹತ್ತು ವರ್ಷ ತುಂಬದ ನಾನು.......

ಸಖ : ಹೇಳಿ ತುಂಬ ಚೆನ್ನಾಗಿದೆ.

ನವಾಬ : ಹೇಳಲು ಸರಿಯಾದ ಪದ ಸಿಗುತ್ತಿಲ್ಲ.

ಸಖ : ನಾನು ಮುಂದುವರೆಸುತ್ತೇನೆ. ಮರದ ಕೆಳಗೆ ಒಬ್ಬ ಯುವಕ. ಒಬ್ಬಳು ಯುವತಿ ಸೊಂಟವನ್ನು ಹಿಡಿದುಕೊಂಡು

ಮಿಡಿನಾಗರ ಜಡೆಯವಳೆ

ರಸಗವಳ ತುಟಿಯವಳೆ

ಸುಖಿಸೋಣ ಬಾರೆ

ಬಾ ಬಾರೇ ನನ್ನ ನಲ್ಲೆ

ರ, ರಾ ಬಾ ಬಾ

ನವಾಬ : ಇನ್ನೊಬ್ಬರ ಅಳುವಿನಲ್ಲಿ ನಗುವ ನಿನ್ನಂತಹವರು ಕಿವಿಯಲ್ಲಿ ಕೆಂಪು ದಾಸವಾಳ ಮುಡಿದಿರುತ್ತೀರಿ ಎಂಬುದನ್ನು ಮರೆತು ಬಿಟ್ಟಿರುತ್ತೀರಿ. ಬೇರೊಬ್ಬರ ಕಣ್ಣೀರು ನಿಮಗೆ ಸುಖ ಕೊಡುತ್ತೆ.

ಸಖಿ : ಛೆ ಛೆ ಛೆ.... ತಪ್ಪು ತಿಳ್ಕೋಬೇಡಿ. ಸಂಜೆಯೆಂದರೆ ಪ್ರೇಮಿಗಳಿಗೆ ಮದವೇರುವ ಹೊತ್ತದು. ಅದಕ್ಕೆ ಅಂದೆ. ಅಂಕುಶ ಬೀಳದೆ ಹೋದರೆ ಆ ಮದ ಇಳಿಯಲ್ಲ ಗೊತ್ತಾ? ಕಾಶಿ ವಿದ್ಯಾಪೀಠದಲ್ಲಿ ಕಲಿತ ಬ್ರಾಹ್ಮಣ ನಾನು. ವಾತ್ಸಾಯನನಿಂದ ಋಗ್ವೇದದ ತನಕ ಎಲ್ಲಾ ಬಾಯಿಪಾಠ ಕಲ್ತ ಘನ ಪಂಡಿತ.

ನವಾಬ : (ಮುಂದೆ ಬಂದು ತನ್ನ ಕೈಗಳಿಂದ ಮುಖ ಮುಚ್ಚಿ) ಇದನ್ನು ವಿವರಿಸಲು ಆಗ್ತಾನೇ ಇಲ್ಲ. ಇಲ್ಲ ನನ್ನಲ್ಲಿ ಪದವಿಲ್ಲ. ಭಯ ಆಗುತ್ತೆ. ಕಣ್ಣೀರು ಬರುತ್ತೆ. ಏನೋ ಒಂಥರಾ ಆಗುತ್ತೆ. ಸಿಟ್ಟು ಬರುತ್ತೆ ಅದನ್ನು ನೆನಸಿದರೆ. ಅವ್ರನ್ನ ಕೊಂದು ಹಾಕೋಣ ಅನಿಸುತ್ತೆ. ಮತ್ತೆ ......... ಮತ್ತೆ ಸುಮ್ಮನೆ ಯಾವುದು ಬೇಡ ಅಂತ ಅನಿಸುತ್ತೆ ಆದರೆ ಅಲ್ಲಿಂದ ನನ್ನ ಇಡಿಯ ಜೀವನಕ್ಕೆ ಎಲ್ಲ ಅಂಟಿಕೊಂಡಿತು. ಈಗ ಬೇಗಂ ಅಂತಾಳೆ ನಿಮಗೆ ಹುಚ್ಚು ಹಿಡಿದಿದೆ ಅಂತ. ಅವಳು ನನ್ನನ್ನ ಕೊಲ್ಲೋಕೆ ಸಂಚು ಹೂಡ್ತಿದಾಳೆ. ಎಂಟು ವರ್ಷದಲ್ಲಿ ಕಣ್ಣಿಗೆ ಕಟ್ಟಿದ ಚಿತ್ರ ಅದೇ ಮುಖ ಬೇಗಂನಲ್ಲಿ ಬೇರೊಂದು ರೂಪದಲ್ಲಿ ಕಾಣಿಸ್ತಾನೇ ಇದೆ.

ಸಖಿ : (ಹತ್ತಿರ ಬಂದು) ಬ್ರಾಹ್ಮಣರಲ್ಲಿ ಸುಳ್ಳು ಹೇಳಬಾರದು. ಸತ್ಯ ಹೇಳಿದರೆ ಪರಿಹಾರ ಒದಗಿಸಲು ನಮ್ಮ ಹತ್ತಿರ ಮಂತ್ರ ಬಲವಿದೆ.

ನವಾಬ : ಹೇಳಿಯೇ ಹೇಳುತ್ತೇನೆ.

(ಕತ್ತಲೆ-ಬೆಳಕು)

ಸಖಿ : (ಬೆಳಕಿನಲ್ಲಿ ಒಬ್ಬನೇ ಇರುತ್ತಾನೆ) (ಸ್ವಗತ)
ಅರುವತ್ತರ ಅಂಚಿನಲ್ಲಿರುವ ನವಾಬ
ಅರಳು ಮರಳು. ಸತ್ಯ ಹೇಳುತ್ತೇನೆ ಅಂತಾನೆ.
ಹೇಳಲಾರ. ಕೋಟೆಯಲ್ಲಿ ಎಷ್ಟೊಂದು ಸುಳ್ಳು ಅಡಗಿವೆ?
ಇವನ ಸಿಂಹಾಸನದಲ್ಲಿ; ಅಂತಃಪುರದಲ್ಲಿ; ಇವನ ನರೆಗೂದಲಲ್ಲಿ
ಎಲ್ಲರದರಲ್ಲಿಯೂ ಏನೇನೋ ಅಡಗಿರಬಹುದು.
ರಹಸ್ಯ ಇಡಿಸುವುದು ಕಷ್ಟ.
(ಸಣ್ಣನೆಯ ವಿಕಟ ನಗು)
ನನ್ನ ಅಂಗೈಯ ರೇಖೆಗಳು ಸೂರ್ಯಸ್ಪಷ್ಟ.
ಅದಕ್ಕೆ ಭವಿಷ್ಯವಿದೆ. ಇದು ಹುಸಿಯಲ್ಲ.

(ಹೆಗಲಲ್ಲಿರುವ ಶಾಲನ್ನು ತೆಗೆದು ತಲೆಗೆ ಮುಂಡಾಸು ಕಟ್ಟಿಕೊಳ್ಳುತ್ತಾನೆ)

ಈಗ ಲಕ್ಷಣ ಬೇರೆಯಾಯಿತು. ಹೆಗಲಿನ ಶಾಲು ತಲೆಗೇರಿದರೆ ನಾನು ಆರ್ಯ ಪುತ್ರನಾಗುತ್ತೇನೆ.

ಮುಖದ ಕಳೆಯು ಬದಲಾಗುತ್ತದೆ. ರಾಜ ಲಕ್ಷಣ ಬರುತ್ತೆ.

(ಪುನಃ ಮುಂಡಾಸು ಬಿಚ್ಚಿ ಹೆಗಲಿಗೆ ಹಾಕಿಕೊಂಡು)

ಕಾಶಿಯಲ್ಲಿ ಕಲಿತ ವಿದ್ಯೆ ಒಂದಲ್ಲ- ಎರಡಲ್ಲ.

ಕಲಿತದ್ದು ಅಷ್ಟೆ- ವಿದ್ಯೆ ಕಲಿಯಲು ಒಂದೊಂದು ವಿಷಯಕ್ಕೂ ಮೂರು ಮೂರು ವರ್ಷ ತಗೊಂಡೆ.

ಗುರುಗಳು ಹೇಳಿದರು - ಒಟ್ಟು ಅರುವತ್ತನಾಲ್ಕು ವಿದ್ಯೆ ಇದೆ ಅಂತ.

ಶ್ಲೋಕ ಕಲಿಸಲು ಅವರು ಕುಂಡೆಗೆ ನಾಗರ ಬೆತ್ತದಲ್ಲಿ ಬೀಸಿದ್ದೇ ಬಂತು!

ಅದು ಮರಿಯಿತೇ ವಿನಃ ನನಗೆ ತಿಳಿಯಲಿಲ್ಲ.

ಗೊತ್ತಾದದ್ದು - ಕೆಲವೇ ವಿದ್ಯೆ - ಅರುವತ್ತನಾಲ್ಕು ವಿದ್ಯೆಯಲ್ಲಿ ನಾಲ್ಕು ವಿದ್ಯೆಗಳು - ತಸ್ಕರ ವಿದ್ಯೆ. ಇದು- ಸಂಸ್ಕೃತದಲ್ಲಾಯಿತು. ಸಣ್ಣವರ ಭಾಷೆಯಲ್ಲಿ (ಮೆಲ್ಲನೆ) ಕಳ್ಳತನ.

ಇನ್ನೊಂದು- ಸುರತವಿದ್ಯೆ(ಮೆಲ್ಲನೆ) ಮೋಸ ಮಾಡುವುದು. ನಾಲ್ಕನೆಯದು ನಾನೇ ಸ್ವಯಂ ಸಾಧಿಸುವುದು - ಜೂಜು ಮತ್ತು ದೊಂಬಿ ಗಲಾಟೆ ಮಾಡಿಸಿ ಸುಮ್ಮನಿರುವುದು. ಗುರುಗಳು ಕೈಮುಗಿದು ಹೇಳಿದರು-ಕಾಶಿಯ ವಿಶ್ವನಾಥ ನಿನ್ನನ್ನು ಕಾಪಾಡಬೇಕು ಅಂತ.

ಆಯಿತು ಗುರುಗಳೇ ಎಂದು ಹೇಳಿ ಅವರ ಕಾಲಿಗಡ್ಡ ಬಿದ್ದು ಬರುವಾಗ ಅವರ ಚಿನ್ನದ ನಶ್ಯದ ಬುರುಡೆ ಕದ್ದು ಬಂದೆ. ಅದು ನನ್ನ ಮೂಲ ಬಂಡವಾಳ. (ಜೋರಾಗಿ ನಗುತ್ತಾ) ಬಂಡವಾಳ ಇಷ್ಟೆ; ಒಳಗೊಂದು- ಹೊರಗೊಂದು.

ನವಾಬನೂ ಅಷ್ಟೆ-ಒಳಗೊಂದು - ಹೊರಗೊಂದು. ಖಿನ್ನ;ದುಃಖಿತ; ತನಗೆ ತಾನೇ, ತಾನು ಏನು ಮಾಡುತ್ತಿದ್ದೇನೆ

ಎಂದು ಅರಿವಿಲ್ಲದ ಭ್ರಮಿತ. ಚಿತ್ತ ವಿಕಲತೆಯಿಂದ ನರಳುವ ಮತಿ ಭ್ರಾಂತ. ಮತಿ ಭ್ರಾಂತನ ಆಡಳಿತದಲ್ಲಿ ನನ್ನ ಮಾತುಗಳೇ ಮೂಲ ಬಂಡವಾಳ. ಈ ಕಾಶೀ ಪಂಡಿತನ ತಲೆಯೆಂದರೆ ತಲೆಯೇ! (ತೆರಳುವನು)



# ದೃಶ್ಯ 2

## ಅಂತಃಪುರದ ದೃಶ್ಯ

ಬೇಗಂ : (ತುರುಬನ್ನು ಸರಿಪಡಿಸಿಕೊಳ್ಳುತ್ತಾ) ಎಷ್ಟು ಬಾಚಿದರೂ ಈ ತುರುಬೊಂದು ಸರಿ ನಿಲ್ಲುವುದೇ ಇಲ್ಲ. ಇದರ ಬುದ್ಧಿ ನವಾಬನ ಹಾಗೆ. ಏಯ್ ಇಲ್ಲಿ ಬಾರೆ.

ಸಖಿ : (ವೀಳಯದೆಲೆಗೆ ಸುಣ್ಣ ಸವರುತ್ತ ಬರುತ್ತಾಳೆ) ಏನವ್ವ.

ಬೇಗಂ : ತುರುಬು ಸರಿ ನಿಲ್ತಾ ಇಲ್ಲ ಕಣೆ.

ಸಖಿ : ತುರುಬನ್ನು ಯಾರೂ ನೋಡಲ್ಲ. ತುರುಬಿಗೆ ಕಟ್ಟುವ ಮಲ್ಲಿಗೆಯನ್ನು, ಕೇದಿಗೆಯನ್ನು ಮೂಸ್ತಾರೆ ಕಣವ್ವ.

ಬೇಗಂ : ಇಲ್ಲ. ನನಗೆ ಸೀರೆಯ ನೆರಿಗೆಯಿಂದ ಹಿಡಿದು ತಲೆಯ ತುರುಬಿನ ತನಕ ಎಲ್ಲವೂ ಸರಿಯಾಗಿರಬೇಕು. ಅಚ್ಚುಕಟ್ಟೂ ಅಂದ್ರೆ ಅಚ್ಚುಕಟ್ಟು, ಸೀರೆಯ ಮಡಿಕೆ ಕೂಡಾ ಮುದ್ದೆಯಾಗಬಾರದು ಗೊತ್ತಾ?

ಸಖಿ : (ವೀಳಯದೆಲೆಯನ್ನು ಬಾಯಿಗೆ ಹಾಕುತ್ತಾ) ರಾತ್ರಿ ಏನು ಮಾಡ್ತೀರಾ?

ಬೇಗಂ : ನಿನ್ನ ನವಾಬಂಗೆ ಸೀರೆಯ ವಿಷಯವೇ ಗೊತ್ತಿಲ್ಲ ಬಿಡು.

ಸಖಿ : ಮತ್ತೆ?!

ಬೇಗಂ : ಗಂಡ ಹೆಂಡಿರ ಹಾಸಿಗೆ ವಿಷಯ ಕೇಳ್ಬಾರ್ದು ಕಣೆ.

ಸಖಿ : ನಾನು ಕೇಳ್ತಿಲ್ಲ. ನಿಮ್ಮ ಮುಖ ಹೇಳ್ತಿದೆ.

ಬೇಗಂ : ಅದು ನಿಂಗೆ ಹೇಂಗೆ ಗೊತ್ತಾಗುತ್ತೆ?

ಸಖಿ : ಅನುಭವ ತಾಯಿ.

ಬೇಗಂ : ಅನುಭವ ಆಗೋಕೆ ನೀನು ಏನು ಎಷ್ಟು ಜನರನ್ನು ಮದ್ವೆ ಆಗಿದ್ದೀಯಿ.

ಸಖಿ : (ಸ್ವಲ್ಪ ವೈಯ್ಯಾರದಿಂದ ಮತ್ತು ನಾಚಿಕೆಯನ್ನು ನಟಿಸುತ್ತ) ನನ್ನ ಹದಿಹರೆಯಲ್ಲಿ ಗಂಡಸರನ್ನು ತಟ್ಟಿ ತಟ್ಟಿ ಹಾರಿಸ್ಬಿಡ್ತಿದ್ದೆ – ಆನೆ ಹಂಗೆ!ಬಂದೋರು ಬಾಲ ಮಡಿಚಿಕೊಂಡು ಕೊಂಯ್ ಕೊಂಯ್ ಅಂತ ಓಡಿ ಬಿಡ್ತಿದ್ದರು. ಯಾರಾದ್ರೂ ಬಾಲ ಬಿಚ್ಚಿದ್ರೆ ಲಂಗವನ್ನ ಮೇಲೆತ್ತಿಕಟ್ಟಿ ತಾಕತ್ತಿದ್ದರೆ ಬನ್ನಿ ಅಂತಿದ್ದೆ.

ಬೇಗಂ : ಈಗೇನಿಲ್ಲ?

ಸಖಿ : ಎದೆಯಲಿ ನೋವನು ಹುಟ್ಟಿಸೊ
ಸವಾರಿ ಮಾಡುವ ಸವಾರ ಬೇಕು
ಬಾರೋ ಬಾರೋ ಸರದಾರ
ಸವಾರಿ ಮಾಡುವ ಸರದಾರ
ತಣಿಸೋ ತಣಿಸೋ ಸರದಾರ
ಬಾಯಾರಿದೆ ಜೀವ.
ಬಯಕೆಯ ಬೆಂಕಿಯ ಆರಿಸಿ ತಣಿಸಿ
ದಾಹವ ಇಂಗಿಸಿ ತಣಿಸೋ ತಣಿಸು

ಬೇಗಂ : ಬೇಡ. ಹಂಗಿಸಬೇಡ.

ಸಖಿ : ಇಲ್ರವ್ವ, ನಿಜ ಹೇಳ್ತಿನಿ. ನಿಮ್ಮದು ಬಾಯಾರಿದ ಭೂಮಿ. ನವಾಬರದು ಬೆಂಕಿಯ ಪಕ್ಕದಲ್ಲಿದ್ದರೂ ಬಿಸಿಯೇರದ ಜೀವ. ತಾಳ ತಂಬೂರಿ ಸರಿಹೋಗಲ್ಲ ತಾಯಿ ಅದಕ್ಕೆ ಸಿಡಿ ಮಿಡಿಯಾಗ್ತೀರಿ.

ಬೇಗಂ : ನಿನಗೆ ಮಾನ–ಮರ್ಯಾದೆ ಇಲ್ಲ.

ಸಖಿ : ಹಸಿವೆಗೆ ಮಾನ ಇದೆಯಾ?

ಬೇಗಂ : ಇಲ್ಲ.

ಸಖಿ : ಬಾಯಾರಿಕೆ ಆದಾಗ ನೀರು ಕುಡಿಯಲ್ವ?

ಬೇಗಂ : ಕುಡಿತೀವಿ.

ಸಖಿ : ಹಂಗೇನೆ ಇದು.

ಬೇಗಂ : ಅದ್ಹೆಂಗೆ ಸಾಧ್ಯ?

ಸಖಿ : ಸುಖ ಕೊಟ್ಟು ಸುಖ ತಗೋಬೇಕು ತಾಯಿ.

ಬೇಗಂ : ಅದು ಅಂತಃಪುರದಲ್ಲಿ ಸಿಗಲ್ಲ.

ಸಖಿ : ಅಂತಃಪುರದ ಕಟ್ಟಡದಲ್ಲಿ ಅಲ್ಲ. ನಿಮ್ಮ ಮೈಯ ವಾಸನೆಯಲ್ಲಿ ಸಿಗುತ್ತೆ ತಾಯಿ.

ಬೇಗಂ : ಏನೇನೋ ಹೇಳ್ಬೇಡ ನಡಿ. ನನ್ನ ಮರ್ಯಾದೆಯ ಕತೆ ಏನಾದೀತು?

ಸಖಿ : ಕತ್ತಲೆಯಲ್ಲಿ ಸೆರಿಗಿನ ಗಂಟು ಬಿಚ್ಚಬೇಕು. ಹಗಲಲ್ಲಿ ಸೆರಿಗನ ಗಂಟು ಬಿಗಿದು ನೆಲನೋಡುತ್ತಾ ನಡೆಯಬೇಕು. ರಾತ್ರಿಯ ಮೈಮೇಲಿನ ಕಲೆಗಳನ್ನು ಗುರುತಿಸೋಕೆ ಯಾರೂ ಅಂದ್ರೆ ಯಾರೂ ಇರಲ್ಲ ಗೊತ್ತಾ? ಹಗಲಲ್ಲಿ ಸೆರಗು ಬಿಚ್ಚಬೇಡ ಅಷ್ಟೆ. ರಾತ್ರಿ ದೀಪ ಆರಿಸಿ ಕತ್ತಲೆಯಲ್ಲಿ ಮೈ ಮಾತಾಡಬೇಕು. ಕಣ್ಣು ನೋಡಬಾರದು ಅಷ್ಟೆ. ಗರತಿಯಾದ ನಿಮಗೆ ಇದರ ಗುಟ್ಟು ಗೊತ್ತಾಯ್ತಾ?

ಬೇಗಂ : ಮರ್ಯಾದೆ ಮುಖ್ಯ.

ಸಖಿ : ಅದು ಹಾಳು ಬಿದ್ದು ಹೋಗಲಿ.

ಬೇಗಂ : ಏನು ಮಾಡಬೇಕು ಅಂತೀಯಾ?

ಸಖಿ : ಸುಖ ಬೇಕಾ? ಮರ್ಯಾದೆ ಬಿಡಿ. ಮರ್ಯಾದೆ ಬೇಕಾ? ಕೋಟೆಯ ಮೇಲೆ ಹತ್ತಿ ಆಕಾಶ ನೋಡ್ತಾ ಸುಮ್ಮನೆ ನಿಲ್ಲಬೇಕು ಅಷ್ಟೆ. ನಿಮ್ಮ ಕೈಯಲ್ಲಿ ಬೇರೇನೂ ಮಾಡಕ್ಕಾಗಲ್ಲ.

ಬೇಗಂ : (ಅವಳ ಕೈ ಹಿಡಿದು) ನಂಗೆ ಗೊಂದಲವಾಗಿದೆ. ಯಾವುದನ್ನೂ ಆಯ್ಕೆ ಮಾಡಲಾರೆ.

ಸಖಿ : ಯಾಕೆ?

ಬೇಗಂ : ರಾತ್ರಿ ನವಾಬರು ಅಪರೂಪಕ್ಕೆ ಬರ್ತಾರೆ.

ಸಖಿ : ಬಂದು........

ಬೇಗಂ : ಬಂದವರು ಹಾಸಿಗೆಯ ಮೇಲೆ ಕುಳಿತುಕೊಂಡು

ಸಖಿ : ಕುಳಿತುಕೊಂಡು ನಿಮ್ಮನ್ನು.

ಬೇಗಂ : ಕುಳಿತುಕೊಂಡು ಕೋಣೆಯ ದಾರಂದವನ್ನು ನೋಡುತ್ತಾ ಜೀವ ಜಂತುಗಳಲ್ಲಿಯೂ ಕಾಮದ ವಾಸನೆ ಹೊಡೆಯುತ್ತಿದೆ. ಇದು

ವಿಕಾರ, ಅಸಹ್ಯ, ಹಿಂಸೆಯ ಮತ್ತೊಂದು ರೂಪ. ಪ್ರತಿಯೊಂದು ಹೆಣ್ಣಿನ ಎದೆಯಲ್ಲಿ ಪಟ್ಟಣಗಳು ಉದುರಿ ತರಗಲೆಯಂತೆ ಬಿದ್ದಿವೆ ಅಂತ ಗೊಣಗುತ್ತಾರೆ.

ಸಖಿ : ಮತ್ತೆ?

ಬೇಗಂ : ತಲೆದಿಂಬನ್ನೆತ್ತಿ ಹುಡುಕುತ್ತಾರೆ.

ಸಖಿ : ಆಗ ನೀವು ಏನು ಮಾಡ್ತೀರಿ?

ಬೇಗಂ : ಒಂದಿನ ಕೇಳಿದೆ- ಏನು ಹುಡುಕುತ್ತಿದ್ದೀರಿ?

ಸಖಿ : ಏನಂದರು?

ಬೇಗಂ : ಕಳೆದದ್ದನ್ನು ಹುಡುಕುತ್ತಿದ್ದೇನೆ.

ಸಖಿ : ಏನು ಕಳೆದು ಹೋಗಿದೆಯಂತೆ?

ಬೇಗಂ : ಅಧಿಕಾರಕ್ಕೇರಿದ ಮೇಲೆ ಸತ್ಯ, ನ್ಯಾಯ, ಧರ್ಮ ಎಲ್ಲವೂ.

ಸಖಿ : ಅದಕ್ಕೆ ನೀವು ಏನು ಮಾಡಬೇಕಂತೆ.

ಬೇಗಂ : ತೆಪ್ಪಗೆ-ನನ್ನ ಪಾಡಿಗೆ ನಾನಿರಬೇಕಂತೆ.

ಸಖಿ : ಅಂದರೆ?

ಬೇಗಂ : ಯಾವುದೂ ಕೇಳಬಾರದಂತೆ.

ಸಖಿ : ನೀವು ಸುಮ್ಮನಿದ್ದರೀ?

ಬೇಗಂ : ಇಲ್ಲ -ಆ ದಿನ- ಏನು ನಡೆಯಿತು ಗೊತ್ತಾ? ಮದುವೆಯಾದ ಹೊಸತು

**(ಕತ್ತಲೆ-ಬೆಳಕು)**

**(ಶಯ್ಯಾಗೃಹ)**

ನವಾಬ : (ಸ್ವಗತಃ) ನಿಜವಾಗಿಯೂ ಹುಡುಕುತ್ತಿದ್ದೇನೆ.

ಬೇಗಂ : (ಹತ್ತಿರ ಕುಳಿತುಕೊಂಡು) ಏನನ್ನು?

ನವಾಬ : ಎಲ್ಲಾ ಕಳೆದುಹೋಗಿದೆ ಅಂತ ಅನಿಸುತ್ತಿದೆ.

ಬೇಗಂ : ಈಗ ಯಾಕೆ ಬೇಕು?

ನವಾಬ : ನಿನಗೆ ಬೇಕು ಅನ್ನುವುದು ಬಿಟ್ಟು ಬೇರೆ ಪದ ಗೊತ್ತಿಲ್ಲ ಹಗಲು ಆಸ್ಥಾನದಲ್ಲಿ ನೀಡಿದ ತೀರ್ಪು ಸರಿಯಾ ತಪ್ಪಾ ಅಂತ

ಹುಡುಕುತ್ತೇನೆ. ಅಷ್ಟೆ ಅಲ್ಲ ಹೆಣ್ಣಿನ ವಿಕಾರ ಹಾಸುಗೆಯಲ್ಲಿ ಇರಬಹುದೆ ಅಂತ.

ಬೇಗಂ : ಹೌದು. ನನಗೆ ಬೇಕು. ಎಲ್ಲವೂ ಬೇಕು. (ಮಂಚದಿಂದ ಕೆಳಗಿಳಿದು ಬಾವುಕವಾಗಿ) ಕಾಲುದೀಪ ಉರಿಯುತ್ತಿರಬೇಕು. ಮಂದ ಬಂಗಾರ ಬೆಳಕಿನಲ್ಲಿ –ನನ್ನ ಕೇದಿಗೆ ಮೈ ಬಣ್ಣವನ್ನು ನೀವು ಬೊಗಸೆಯಲ್ಲಿ ಹಿಡಿಯಬೇಕು. ನಿಮ್ಮ ಕಣ್ಣರಳಬೇಕು. ನೀವು ನಾಗರಹಾವಿನಂತೆ ಬುಸುಗುಡಬೇಕು. ಹುಲಿಯಂತೆ ಪರಚಬೇಕು. ಚಿರತೆಯಂತೆ ಅರೆ ಹೊಡೆದು ನನ್ನನ್ನು ಮಗುಚಬೇಕು. ನಾನು ನೋವಿನಿಂದ ಒಮ್ಮೆ- ಒಮ್ಮೆ ಮಾತ್ರ ಕೆಳತುಟಿಯಿಂದ ಅಳಬೇಕು. ಅದು ಬೇಕು ನವಾಬ. ಕೈಮುಗಿದು ಕೇಳ್ತೇನೆ- ಅದೊಂದು ಗಳಿಗೆಯನ್ನು ಮಾತ್ರ ನನಗೆ ಕೊಡು. ಅದು ಬೇಕು. ಬೇಕು ಮಂದಬೆಳಕಿನಲ್ಲಿ. ಹಿಂಸೆ ಬೇಕು. ನೋವು ಬೇಕು. ಯಾತನೆ ಬೇಕು. ಕಣ್ಣು ತುಂಬಾ ನಾನು ಅಳಬೇಕು. (ನವಾಬನ ಕಾಲು ಹಿಡಿಯುತ್ತಾಳೆ)

ನವಾಬ : ದೇಹದ ತುಂಬಾ ಬಯಕೆಯ ಮೂಟೆ ಹೊತ್ತವಳಿಗೆ ಈ ನಿರಿಗೆ ಕಟ್ಟಿದ ನನ್ನ ಹಣೆಯ ಗೆರೆಯು ಕಾಣಿಸುವುದಿಲ್ಲ.

ಬೇಗಂ : ಹೆಣ್ಣಿನ ಬಯಕೆಯ ಬೆಲೆ ನಿಮಗೆ ತಿಳಿಯುವುದಿಲ್ಲ.

ನವಾಬ : (ನಿರಾಸಕ್ತನಾಗಿ) ಹ್ಞೂಂ.

ಬೇಗಂ : ನಿಮ್ಮ ಗಂಡಸರ ಪ್ರಪಂಚವೇ ಬೇರೆ.

ನವಾಬ : (ನಿಟ್ಟುಸಿರು ಬಿಟ್ಟು) ವಯಸ್ಸಾದ ತೆಂಗಿನ ಮರದಲ್ಲಿ ಕೈಗೆಟುಕುವ ಎಳನೀರನ್ನು ನಿರೀಕ್ಷಿಸಬೇಡ.

ಬೇಗಂ : (ಎದ್ದು ನಿಂತು ಕಣ್ಣೊರಸಿ) ಗಳಿಗೆಗೊಂದು ಮಾತು. ಹಗಲಿಗೊಂದು ವೇಷ. ರಾತ್ರಿಗೊಂದು ವೇಷ.

ನವಾಬ : ಹಗಲಿನ ಪಾಪವನ್ನು ರಾತ್ರಿಯಲ್ಲಿ ತೊಳೆಯುತ್ತೇನೆ. ಅದು ನನ್ನ ಆತ್ಮ ನಿರೀಕ್ಷೆಯ ಕಾಲ. ಆತ್ಮ ನಿರೀಕ್ಷೆಯಿಲ್ಲದವನು ಕೊಳೆಯುತ್ತಾನೆ ಕುಷ್ಠರೋಗಿಯಂತೆ.

ಬೇಗಂ : ಅದು ನಿಮಗೇ ಸರಿ. ನಮಗೆ ಆತ್ಮವಿಲ್ಲಾಂತ ತಿಳ್ಕೊಂಡ್ರಾ?

ನವಾಬ : ಅತಿಯಾದ ಆತ್ಮಪ್ರತಿಷ್ಠೆ; ಅಹಂಕಾರ, ಒಣಜಂಭ ತರಗೆಲೆಯಂತೆ ಹಾರಿಹೋಗುತ್ತೆ. ಅಹಂಕಾರಿ ತನ್ನ ತಲೆಯ ಮೇಲೆಯೇ ಮಣಬಾರದ ಕಲ್ಲು ಹೊತ್ತಿರುತ್ತಾನೆ. ಅವನು ಹುಡುಕುವುದಿಲ್ಲ.

ಬೇಗಂ : ನನ್ನ ಆಸೆಯನ್ನು ತುಳಿಯಬೇಡಿ. ಅದು ಸುಡುತ್ತದೆ.

ನವಾಬ : ಸುಡುವ ಬೆಂಕಿ ಕರುಳಲ್ಲಿದೆ. ಮಧ್ಯಾಹ್ನ ಉರಿಯುತ್ತದೆ. ನ್ಯಾಯ ತೀರ್ಮಾನದಲ್ಲಿ ತಲೆಯಲ್ಲಿ ಉರಿಯುತ್ತದೆ. ನನ್ನ ಪಾಡಿಗೆ ಬಿಡು. ಹೋಗಿ ಮಲಗಿಕೋ.

ಬೇಗಂ :ಸರಿ – ಇದನ್ನು ಅನುಭವಿಸುತ್ತೀರಿ– ಹೆಚ್ಚು ದಿನಬೇಡ. (ಮಂಚದ ಮೇಲಿರುವ ಶಾಲು ಹೊದ್ದು ಮಲಗುತ್ತಾಳೆ. ನವಾಬ ಮಂಚದ ಕೆಳಗೆ ಏನನ್ನೋ ಹುಡುಕುತ್ತಾನೆ.

ನವಾಬ : ನೀರವ ರಾತ್ರಿ, ಮೌನ,

ಏಕಾಂತ. ಭದ್ರವಾದ ಕೋಟೆ.

ಇವುಗಳ ಮಧ್ಯ ನಾನು, ಮುದಿತನಕ್ಕೆ ಇಳಿದ ನವಾಬ.

ಆದರೂ ನಿದ್ದೆ ಬರೋಲ್ಲ. ನಿದ್ದೆಯಿಲ್ಲದ ರಾತ್ರಿ ಭೀಕರ; ಕಠೋರ! ಹಿಂಸೆ.

(ಮಂಚದ ಕಾಲಿಗೆ ಒರಗಿ ಮಲಗುತ್ತಾನೆ)

ಬೇಗಂ : (ದಡಕ್ಕನೆ ಎದ್ದು ನಿದ್ದೆ ಮಾಡಿರುವ ನವಾಬನನ್ನು ನೋಡುತ್ತಾ)

ಈ ಗಂಡಸು ಮಲಗಿದ್ದಾನೆ. – ಗೊರಕೆ ಹೊಡೆಯುತ್ತಾ.

ಬೆಳಿಗ್ಗೆ ಸಿಂಹಾಸನ ಏರುತ್ತಾನೆ. ಅಧಿಕಾರ ಚಲಾಯಿಸ್ತಾನೆ. ರಾಜ್ಯಭಾರ ನಡೆಸುತ್ತಾನೆ. ರಾತ್ರೆ ಇಲ್ಲಿ ನರಕ!

ಲೋಕದ ಮುಖಕ್ಕೆ ಸಜ್ಜನ–ಇಲ್ಲಿ ನನಗೆ ಸುಖವಿಲ್ಲದ ರಾತ್ರಿಗಳು! (ನಿಟ್ಟುಸಿರು) ಇವನ ಮರುಳನ್ನು ನೋಡುವ ಹಿಂಸೆ.

(ತಟ್ಟನೆ ಎದುರು ಬಂದು)

ಇವನು ಮೈಯೆಲ್ಲ ಥಂಡಿ ಹೊಡೆದಂತೆ. ಜಗತ್ತಿನ ಯಾವುದಕ್ಕೂ ಸಂಬಂಧವಿಲ್ಲದಂತೆ, ಹೆಂಡತಿಯ ಅಳುವಿಗೂ ಬಗ್ಗದಂತೆ, ಒಬ್ಬ ಕನಸುಗಾರನಂತೆ ವರ್ತಿಸುವುದನ್ನು ಕಂಡರೆ ಕಾಲ ಉಂಗುಷ್ಟದಿಂದ ಪ್ರಾರಂಭ ಮಾಡಿ ನೆತ್ತಿಯ ತನಕ ಮೆಣಸಿನ ಪುಡಿಯಲ್ಲಿ ಹುರಿದ ಅನುಭವವಾಗುತ್ತದೆ. (ತಕ್ಷಣ ನವಾಬನ ಹತ್ತಿರ ಬಂದು) ಏಯ್ ನವಾಬ (ಅವನ ಕುತ್ತಿಗೆ ಹತ್ತಿರ ಕೈ ತಂದು) ಏಳೋ ಮೇಲೆ

ನವಾಬ : (ಗಾಬರಿಯಿಂದ) ಏನಾಯ್ತು?

ಬೇಗಂ : ಹೇಳು-ಉತ್ತರ ಹೇಳು.

(ನವಾಬ ಅವಳ ಮುಖವನ್ನು ನೋಡುತ್ತಾನೆ)

ಬೇಗಂ : ನನ್ನನ್ನು ಯಾಕೆ ಮದುವೆಯಾದೆ?

ನವಾಬ : (ಕುಳಿತಲ್ಲಿಂದಲೇ) ನನ್ನಲ್ಲಿ ಉತ್ತರವಿಲ್ಲ.

ಬೇಗಂ : ಪಂಜರವಿಲ್ಲದ ಹುಲಿಗೆ: ದಾಡೆಯಿಲ್ಲದ ಹಂದಿಗೆ ಉತ್ತರವಿಲ್ಲ.

ನವಾಬ : (ಮೌನ) ಮತ್ತೆ?

ಬೇಗಂ : ನಿನ್ನನ್ನು ಮದುವೆಯಾಗುವಾಗ ಕೈತುಂಬಾ ತೊಟ್ಟುಕೊಂಡು ಬಂದ ಬಳೆಗಳಂತೆ ಕನಸುಗಳನ್ನು ತೊಟ್ಟುಕೊಂಡು ಬಂದೆ. ಆದರೆ ಅದು ಪುಡಿ ಪುಡಿಯಾಯಿತು.

ನವಾಬ : ಅಜೀಮ ಗರೀಬ. ನಾನು ಸುಲ್ತಾನ.

ಬೇಗಂ : ನನ್ನ ಅಪ್ಪನಿಗೆ ಮೂರಜನ ಹೆಂಡಿರು. ಮೊಹಲ್ಲಾದ ಗಲ್ಲಿಯ ಗಲೀಜಿನಲ್ಲಿ ಹಂದಿಯ ಮರಿಗಳಂತೆ ಬೆರಿಪಿರಿ ಮಾಡ್ತಾ ಬೆಳೆದವು. ಚಿಕ್ಕಮ್ಮನ ಮಕ್ಕಳ ಕುಂಡೆ ತೊಳೆಯಬೇಕು. ಸಿಂಬಳ ತೆಗಿಯಬೇಕು. ಪಾತ್ರೆ ತೊಳೀಬೇಕು. ಸಣ್ಣಮನೆಯಲ್ಲಿ ರಾತ್ರಿ ಒಂದೇ ಹರಿದ ಚಾಪೆಯಲ್ಲಿ ಒತ್ತೊತ್ತಾಗಿ ಮಲಗಬೇಕು. ಸಣ್ಣವರ ಉಚ್ಚೆ ನನ್ನ ಲಂಗದ ಮೇಲೆ ಬಿದ್ದು ಅಸಹ್ಯವಾಗುತ್ತಿತ್ತು. ಆಗ ಕುದುರೆಯೇರಿ ಬಂದ ನೀನು-ನನ್ನ ನೋಡಿದೆ. ನಿನ್ನ ಮಂತ್ರಿಗಳು ನಿಖಾ ಮಾಡಿಸಿದರು. ಎತ್ತಿಕೊಂಡು ಬಂದರು. ಈಗ ನೋಡಿದರೆ ಅಜೀಮನ ಬೆವರವಾಸನೆಯೇ ನಿನ್ನ ಅತ್ತರಿನ ವಾಸನೆಗಿಂತ ಲಾಯಕ್ಕು ಎಂದನ್ನಿಸುತ್ತದೆ. ನಿನ್ನ ಸತ್ತು ಹೋದ ಮೊದಲ ಹೆಂಡತಿಯಂತೆ ನಾನು ಆಗಬಹುದು ಎಂದು ತಿಳಿದರೆ ಅದು ನಿನ್ನ ತಪ್ಪು.

ನವಾಬ : ನಿನಗೆ ಮನಸ್ಸು ಸರಿಯಿಲ್ಲ. ಹೋಗಿ ಮಲಗು.

ಬೇಗಂ : (ಅವನ ರಟ್ಟೆಯನ್ನೆತ್ತಿ) ಏಳೋ ಮೇಲೆ - ಈವತ್ತು ನೀನು ಗೊರಕೆ ಹೊಡೆಯಲೇಬಾರದು. ಹಾಗೆ ಮಾಡಿ ಬಿಡ್ತೇನೆ. ನಂಗೆ ನೀನು ಮೋಸ ಮಾಡಿದೆ.

(ನವಾಬ ಎದ್ದು ನಿಲ್ಲುತ್ತಾನೆ)

ಬೇಗಂ : ನೀನು ನವಾಬ. ನಿನ್ನದು ಒಳ್ಳೆಯ ಭಾಷೆ.

ನಾನು ಗಲ್ಲಿಯಲ್ಲಿ ಬೆಳೆದವಳು. ಮಾತಾಡಿದರೆ-

ನವಾಬ : ಮಾತು ಮತ್ತು ಅದರ ಅರ್ಥ ಎರಡೂ ಅವರವರಿಗೆ ಬಿಟ್ಟಿದ್ದು.

ಬೇಗಂ : ಬೆಣ್ಣೆಯಿಂದ ಕೂದಲು ತೆಗೆಯಬೇಡ. ನಿನಗೆ ಕೊಡುವ ಗೌರವ ಮುಗಿಯಿತು. ಇನ್ನು ಏನಿದ್ದರೂ ನನ್ನ ಭಾಷೆ ಗೊತ್ತಾಯ್ತ?

ನವಾಬ : ತಾಳ್ಮೆ: ವಿವೇಕ: ಎರಡು ಒಳ್ಳೆಯದು.

ಬೇಗಂ : ತಾಳ್ಮೆಯ ಪಾಠ ನನಗೆ ಬೇಡ.

ನವಾಬ : ಹೀಗೆ ಮಾತಾಡಿದರೆ ಹೇಗೆ?

ಬೇಗಂ : ನಾನು ಹದ ಮೀರಿದ್ದೇನೆ.

ನವಾಬ : ನನ್ನನ್ನು ಕಿತ್ತು ತಿನ್ನಬೇಡ.

ಬೇಗಂ : ಮದುವೆಯಾಗಿ ನನ್ನನ್ನು ಹಾಳು ಮಾಡಿದೆ. ಆಗ ಏನೂ ಅನಿಸಿಲ್ಲ ನಿನಗೆ. ನನ್ನನ್ನು ಯಾಕೆ ಒಪ್ಪಿಗೆಯಿಲ್ಲದೆ ಹಾರಿಸಿಕೊಂಡು ಬಂದು ಅಂತಃಪುರದಲ್ಲಿ ಕೊಳೆಹಾಕಿದೆ?

ನವಾಬ : ಅದು ನನ್ನ ತಪ್ಪು. ನಿನ್ನ ನಾಲಿಗೆಯಲ್ಲಿ ಸಾವಿರಾರು ಹುಳಗಳು ಹೊರಳಾಡುತ್ತಿವೆ.

ಬೇಗಂ : ಚೆಂದದ ಬೊಂಬೆ ಅಂತಃಪುರಕ್ಕೆ ಬೇಕಿತ್ತು ಅಲ್ವಾ?

ನವಾಬ : ನೀನು ಹಾಗೆ ತಿಳಿದುಕೊಂಡರೆ ಅದುವೇ ಸರಿ.

ಬೇಗಂ : ನಿನಗೆ ಗಂಡಸುತನ ಇಲ್ಲ.

ನವಾಬ : (ಅವಳಿಗೆ ಬೆನ್ನು ಹಾಕಿ ಸ್ವಗತ) ವಿಕಾರ ಮನಸ್ಸು.

ಬೇಗಂ : ನೀನು ನಪುಂಸಕ, ಹೇಡಿ, ಕೈಲಾಗದವನು. ಬೇಡಿ ತಿನ್ನುವವರು ಕೂಡಾ ನಿನ್ನಷ್ಟು ಅಯೋಗ್ಯರಲ್ಲ.

ನವಾಬ : ಅವಿವೇಕಿಯ ಪಿತ್ಥ ಕೆರಳಿದೆ. ನೀನು ಯೋಚಿಸಿ ಮಾತಾಡುವುದು ಒಳ್ಳೆಯದು.

ಬೇಗಂ : ಅದೇ ಮಾತನ್ನು ನಾನೂ ಹೇಳಬಹುದು-ಅದು ಸುಲಭ.

ನವಾಬ : ಹೇಳಿನೋಡು.

ಬೇಗಂ : (ಸಿಟ್ಟಿನಿಂದ) ಕೈಲಾಗದ ಷಂಡನಿಗೂ ಮೈತುಂಬಾ ಪೊಗರು.

ನವಾಬ : ಅಸಹ್ಯ ಮತ್ತು ಕೀಳಾದ ವಾಕ್ಯಗಳು!

ಬೇಗಂ : (ಮತ್ತೆ ಕೆರಳಿ) ನೀನೂ ಒಬ್ಬ ಗಂಡಸೇನೊ?

(ನವಾಬ ತಡೆಯಲಾಗದ ಸಿಟ್ಟಿನಿಂದ ಕೈಯೆತ್ತುತ್ತಾನೆ)

ಬೇಗಂ : ಗಂಡುಸಾವರೆ ಹೊಡಿ.

[ನವಾಬ ಹೊಡೆಯುತ್ತಾನೆ. ಬೇಗಂ ಅವನ ಮುಖಕ್ಕೆ ಉಗುಳಿ ಪುನಃ ಅವನಿಗೆ ದಬದಬನೆ ಹೊಡೆಯುತ್ತಾಳೆ. ನವಾಬ ಕೆರಳಿ ಆಕ್ರಮಿಸುತ್ತಾನೆ]

[ಕತ್ತಲೆ-ಬೆಳಕು-ಬೇಗಂ ನರಳುತ್ತಾ ಬರುತ್ತಾಳೆ.]

ಬೇಗಂ : ಎಲ್ಲಿತ್ತು ಈ ಗಂಡಸುತನ? ಉರಿಯುವ ಜ್ವಾಲೆ.

ತಿವಿಯುವ ಮೃಗ - ಸೀಳುನಾಯಿ.

ತುಳಿಯುವ ಗಂಡಾನೆ. ಮೈಯ ಒಂದಿಂಚು ಕೂಡಾ ಬಿಡದೆ ನವಾಬ ತುಳಿದ. ಆ ಮುದಿ ದೇಹದಲ್ಲಿ ಮೈತುಂಬಾ ಕಾಮದ ಕ್ರೌರ್ಯವಿತ್ತು. ಎಲ್ಲಾ ಮುಗಿದ ಮೇಲೆ ನವಾಬ ಹೇಳಿದ್ದು ಒಂದೇ ಮಾತು; "ಏಯ್ ಹೆಂಗಸೆ. ಬಯಕೆಯ ಬತ್ತಲೆ ಕುದುರೆಯೇರಿ ಲಂಗುಲಗಾಮು ಇಲ್ಲದೆ ಓಡಬೇಡ. ಅದರ ತೃಷೆ ಕುಡಿದಷ್ಟು ಮುಗಿಯುವುದಿಲ್ಲ. ಬಯಕೆ ಉಪ್ಪು ನೀರು. ಒಂದು ತಿಳಿದುಕೋ- ನೀನು ಮಂಚದಲ್ಲಿ ಇನ್ನು ಮುಂದೆ ಎಂದೂ ನನ್ನನ್ನು ಚಂಚಲಗೊಳಿಸಲಾರೆ." ಅಯ್ಯೋ ನೋವು.

(ಕತ್ತಲೆ-ಬೆಳಕು)

ಸಖಿ : (ನಿಟ್ಟುಸಿರು ಬಿಟ್ಟು) ಅಯ್ಯೋ ಪಾಪ.

ಬೇಗಂ : ಯಾರು?

ಸಖಿ : ನೀವು.

ಬೇಗಂ : ಹಾಗನ್ನಬೇಡ

ಸಖಿ : ಕರುಳು ಚುರುಕೆನ್ನುತ್ತದೆ.

ಬೇಗಂ : ಅಂದ ಹಾಗೆ. ನೀನಿಲ್ಲಿ ಕೆಲಸಕ್ಕೆ ಸೇರಿ ಎಷ್ಟು ವರ್ಷವಾಯ್ತು?

ಸಖಿ : ಈ ಬೇಸಿಗೆ ದಾಟಿದರೆ ಸರಿಯಾಗಿ ಐದು ವರ್ಷ. ಅದರ ಮೊದಲು ಹೊರ ಚಾಕ್ರಿಯಲ್ಲಿದ್ದೆ. ನೀವು ಒಳಚಾಕ್ರಿಗೆ ಕರೆದ್ರಿ. ಯಾಕೆ?

ಬೇಗಂ : ನಿನಗೆ ಇಲ್ಲಿ ನಡೆಯುವುದು ಎಲ್ಲಾ ತಿಳಿಯುತ್ತಾ?

ಸಖಿ : ಅಯ್ಯೋ-ದರಿದ್ರ ಹೆಂಗಸು ನಾನು. ನಂಗೆಲ್ಲಿ ತಿಳಿಯುತ್ತೆ.

ಬೇಗಂ : ಹೊರಚಾಕ್ರಿಯಲ್ಲಿ ಏನು ಮಾಡ್ತಿದ್ದೆ?

ಸಖಿ : ಲಾಯದಲ್ಲಿ ಲದ್ದಿ ಬಾಚುವುದು. ಅದು ಬಿಟ್ರೆ-ಮತ್ತೆ ಏನು ತಿಳಿಯುತ್ತೆ? ಬುದ್ಧಿ ತಿಳಿಯದ ಮಂಕು ನಾನು. ಕುದ್ರೆ ಲಾಯದವರಿಗೆ ಆಸ್ಥಾನದ ಒಳಗೆ ಇಣುಕಿ ನೋಡೋಕೂ ಬಿಡೋಲ್ಲ.

ಬೇಗಂ : ನಂಗೂ ಆಸ್ಥಾನದಲ್ಲಿ ಏನು ನಡೆಯುತ್ತೆ ಗೊತ್ತಿಲ್ಲ. ಯಾರು ಏನು? ಎತ್ತ? ಏನು ಕತೆ? ಒಂದೂ ಗೊತ್ತಿಲ್ಲ. ಗೊತ್ತು ಮಾಡಿಕೋ ಬೇಕು.

ಸಖಿ : ನೀವು ಸುಖವಾಗಿರಿ. ಅದು ನಿಮಗೆ ಹಿಡಿಸದ ವ್ಯವಹಾರ.

ಬೇಗಂ : ಯಾಕೆ ಹೇಳು?

ಸಖಿ : ಹೆಂಗಸರಿಗೆ ಆಸ್ಥಾನ-ಮಂತ್ರಿಗಳು-ಸೈನಿಕರು-ಇದೆಲ್ಲಾ ಸುಖ ಕೊಡೊಲ್ಲ ತಾಯಿ. ನೀವು ನೆಮ್ಮದಿಯಿಂದ ಇರಬೇಕಾದರೆ ಅಂತಃಪುರವಷ್ಟೆ ಸಾಕು. ಕವ್ವಾಲಿ ಕೇಳಿ. ಬೇಡವಾದ್ರೆ ಈಜು ಕೊಳ. ಅದೂ ಬೇಡವಾದ್ರೆ-ಗುಟ್ಟಾಗಿ-ನವಾಬ...

ಬೇಗಂ : ನಿಂಗೊತ್ತಿಲ್ಲ. ನನಗೆ ಜೀವನದಲ್ಲಿ "ಬೇಕು" ಅನ್ನುವ ಪದ ಗೊತ್ತು. ಆದರೆ ಅದನ್ನು ನನಗೆ ಬೇಕಾದ ಹೊತ್ತಿಗೆ ಮಾತ್ರ ಬಳಿಸಿಕೊಳ್ತೀನೆ.

ಸಖಿ : ನಾನೀಗ ಏನು ಮಾಡಬೇಕು?

ಬೇಗಂ : ನವಾಬರ ಆಸ್ಥಾನ; ಹಗಲು; ಅವರ ಮಂತ್ರಿಗಳು ಎಲ್ಲದರ ವಿಷಯಗಳು ತಿಳಿಯಬೇಕು. (ಲಟಿಕೆ ತೆಗೆಯುತ್ತಾ ಸ್ವಗತದಲ್ಲಿ) ಎಲ್ಲಾ ಇವಳಿಗೆ ತಿಳಿಯುವುದು ಬೇಡ. ರಹಸ್ಯಗಳಿಗೆ ರೆಕ್ಕೆಯಿರಬಾರದು. (ತಿರುಗಿ) ನೀನೀಗ ಒಂದು ಕೆಲಸ ಮಾಡು. ನಾಳೆ ನಟ್ಟನಡು ಮಧ್ಯಾಹ್ನದ ಹೊತ್ತಿಗೆ ಅರಮನೆಯ ವಿಷಯ ತಿಳಿದಿರುವ, ರಾಜಕೀಯ ತಿಳಿದಿರುವ – ಗುಟ್ಟನ್ನು ರಟ್ಟು ಮಾಡದಿರುವ ಯಾರಾದರೂ ಇದ್ದರೆ ನನ್ನ ಬಳಿಗೆ ಕಳಿಸು. ನಾನು ತುಂಬ ತಿಳಿಯಬೇಕು.

ಸಖಿ : ನನ್ನ ಲಂಗದ ಮೇಲೆ ಓಡಾಡುತ್ತಿದ್ದ ಕುದುರೆಲಾಯದ ಹುಳಗಳು, ನನ್ನ ಚರ್ಮ, ಕಸುವು ಕಳೆಯದ ದಿನಗಳಲ್ಲಿ ಮುಸುಕು ಹಾಕಿಕೊಂಡು ಬರುತ್ತಿದ್ದ ಅರಮನೆಯ ಊಳಿಗದವರನ್ನು ಬಿಟ್ಟರೆ ಇನ್ನಾರೂ ನನಗೆ ಗೊತ್ತಿಲ್ಲ.

ಬೇಗಂ : (ಅವಳ ಹತ್ತಿರ ಬಂದು) ಆದರೂ ನನಗಾಗಿ ಒಂದು ಸಾರಿ ಪ್ರಯತ್ನ ಮಾಡು. ಎಲ್ಲಿಯಾದರು ಯಾರಿಗಾದರೂ ನಿನ್ನ ಕಪ್ಪೆ ಬಾಯಲ್ಲಿ ವಟಗುಟ್ಟಿದರೆ ಮರುದಿನ ನಿನ್ನ ಹೆಣ ಕೋಟೆಯ ಬಂಡೆಗಲ್ಲಲ್ಲಿ ನುಚ್ಚುನೂರಾಗಿ........

ಸಖಿ : ಮುಂದಿನದು ಹೇಳಬೇಕಿಲ್ಲ ತಾಯಿ. ಗರೀಬರಿಗೆ ಅರ್ಥವಾಗುತ್ತೆ ಗರೀಬರ ಹಸಿವೆ ಮಾತಿಗಿಂತ ದೊಡ್ಡದನ್ನು ತಿಳಿಯುವಂತೆ ಕಲಿಸಿಕೊಟ್ಟಿರುತ್ತೆ. ನಾನಿನ್ನು ಬರ್ತೀನಿ.

ಬೇಗಂ : (ಗಡುಸಾದ ಧ್ವನಿಯಿಂದ) ನೆನಪಿಟ್ಟುಕೊ. (ಮತ್ತೆ ಅನುನಯದ ಧ್ವನಿಯಿಂದ) ಮುಂದೊಂದು ದಿನ ನಿನ್ನ ಗುಡಿಸಲು ಒಂದು ಸುಂದರ ಮನೆಯಾಗಬೇಕಲ್ಲವೆ? (ಅವಳ ಕೆನ್ನೆ ತಟ್ಟಿ) ಜೋಪಾನ.



## ದೃಶ್ಯ 3

(ಬ್ರಾಹ್ಮಣರ ಅಗ್ರಹಾರ. ಬ್ರಾಹ್ಮಣರು ಪಂಚಾಯತಿ ಕಟ್ಟೆಯಲ್ಲಿ ಸೇರಿದ್ದಾರೆ)

ಋಗ್ವೇದಿ : (ನಶ್ಯವನ್ನು ಮೂಗಿಗೇರಿಸುತ್ತ) ಇದು (ಆಕ್ಷೀ) ಕಲಿಕಾಲದ ಮೂರನೇ ಪಾದ. ಕಲ್ಕಿ ಹೊರಟ ದಿಕ್ಕೇ ಸರಿ ಇಲ್ಲ.

ಜೋಯಿಸ : ಕವಡೆ ತಿರುಗಿಸಿ ತಿರುಗಿಸಿ ಸಾಕಾಯಿತು. ಶುಭಫಲ ಅಂತು ಕಾಣಿಸೋದಿಲ್ಲ.

ಶ್ರೋತ್ರಿ : ಎಂತ ಕಷ್ಟ ಅಂದ್ರೆ ಹೇಳಿ ಪ್ರಯೋಜನ ಇಲ್ಲ ಅಂತೀನಿ.

ಋಗ್ವೇದಿ : ಈ ಕಾಲ ಬದಲಾಗ್ತಾ ಹೋದಂಗೆ ನಮ್ಮ ಬೆಲೆನೂ ಕಡಿಮೆ ಆಗ್ತಾ ಹೋಗಿದೆ.

ಶ್ರೋತ್ರಿ : ಮಂತ್ರ ಎಷ್ಟು ಹೇಳಿದರೂ ಜನ ನಂಬಲ್ಲ.

ಜೋಯಿಸ : ನಾನು ಕವಡೆ ತಿರುಗಿಸಿದರೂ ನಂದು ಅದೇ ಕತೆ.

ಋಗ್ವೇದಿ : ನೀವು ಕವಡೆ ತಿರುಗಿಸಿ, ಮಂತ್ರ ಹೇಳಿ ಪರಿಸ್ಥಿತಿ ಸುಧಾರಿಸೋಕೆ ಸಾಧ್ಯನೇ ಇಲ್ಲಪ್ಪ.

ಜೋಯಿಸ : ನಾನು ಪಂಚಾಂಗ ಬಿಡಿಸಿ ಜಾತಕ ಬರಕೊಟ್ಟು ಶುಭಕರಣ, ಶುಭಯೋಗ, ಶುಭ ನಕ್ಷತ್ರ ಅಂತೆಲ್ಲಾ ಗೀಚಿ ಜನರಿಗೆ ಒಳ್ಳೆಯದಾಗಲಿ ಅಂದ್ರೆ ಜನ ಮಾಟ ಮಾಡೋರ ಹತ್ರ ಹೋಗೋಕೆ ಶುರು ಮಾಡಿದ್ರು.

ಶ್ರೋತ್ರಿ : ದೇವ್ರ ಪೂಜೆ ನಿಷ್ಠೆಯಿಂದ ಮಾಡಿ ಆರತಿ ತಟ್ಟೇಲಿ ನಾಲ್ಕು ಕಾಸು ಬೀಳ್ಲಿ ಅಂದ್ರೆ ಈ ಮುಂಡೆಮಕ್ಳು ಆಚಾರ ವಿಚಾರ ಬಿಟ್ಟು

ಬೀದಿ ಬೀದಿಲಿ ಮಾರಮ್ಮನ ಜಾತ್ರೆ ಮಾಡೋಕೆ ಶುರು ಮಾಡಿದ್ದಾರೆ.

ಋಗ್ವೇದಿ : ಒಂದು ಮಂತ್ರ ಇಲ್ಲ, ಒಂದು ಶ್ಲೋಕ ಇಲ್ಲ. ಢಂ ಢಂ ಡೋಲು. ಇಷ್ಟು ಬಿಟ್ರೆ ಬೇರೆ ಏನೂ ಇಲ್ಲ. ಹೀಗಾದ್ರೆ ಈ ವರ್ಣಾಶ್ರಮ ಧರ್ಮ ಉಳಿಯೂದಾದ್ರು ಹೇಗೆ ಅಂತ ಅಂತೀನಿ.

ಜೋಯಿಸ : ಮೊನ್ನೆ ಏನಾಯ್ತು ಗೊತ್ತಾ? ಈ ನಮ್ಮ ಅಗ್ರಹಾರದಲ್ಲೇ ನಡೆದ ಕತೆ ನಿಮಗೆ ಗೊತ್ತಿಲ್ಲ ಅಂತ ಅನ್ಸುತ್ತೆ.

ಋಗ್ವೇದಿ : (ಮತ್ತೊಂದು ಚಿಟಿಕೆ ನಸ್ಯ ಸೇರಿಸುತ) ಏನಾಯ್ತು?

ಶ್ರೋತ್ರಿ : (ಕಂಕುಳನ್ನು ಒರೆಸಿಕೊಳ್ಳುತ್ತಾ. ಅದರಲ್ಲೇ ಮುಖವನ್ನು ಒರೆಸಿಕೊಂಡು) ಏನಾಯ್ತು?

ಜೋಯಿಸ : ಪುರೋಹಿತರ ಮನೇಲಿ ಏನಾಯ್ತಪ್ಪ ಅಂದ್ರೇ...

ಇಬ್ಬರು : ಏನಾಯ್ತಪ್ಪ?

ಜೋಯಿಸ : ಏನಾಯ್ತಪ್ಪ ಅಂದ್ರೇ (ಜನಿವಾರದಿಂದ ಬೆನ್ನನ್ನು ಕೆರೆಸಿಕೊಂಡು) ಏನಾಯ್ತಪ್ಪ ಅಂದ್ರೇ

ಇಬ್ಬರು : ಅದೇನು ಬೇಗ ಹೇಳಿ.

ಜೋಯಿಸ : ಹೇಳ್ತಿನಿ ಏನಾಯ್ತಪ್ಪ ಅಂದ್ರೇ ....
ಏನಾಯ್ತಪ್ಪ ಅಂದ್ರೆ ಪುರೋಹಿತರ ಮಗಳು.... ಎಲ್ಲಿಗೆ ನಿಲ್ಲಿಸಿದೆ.

ಇಬ್ಬರು : ಅಯ್ಯೋ, ನಿಮ್ಮ ಕತೆಯೇ (ಕುಳಿತುಕೊಂಡು) ಸಾಕಾಗಿ ಹೋಯ್ತಪ್ಪ.

ಜೋಯಿಸ : ಸಾಕಾಗಕ್ಕೆ ಇನ್ನು ಶುರುವೇ ಆಗಿಲ್ಲ.

ಇಬ್ಬರು : (ಎದ್ದು ನಿಂತು) ಅಯ್ಯೋ ಮಾರಾಯ್ರೆ ಹೇಳದಿದ್ರೆ ಹೇಳಿಯಪ್ಪ.

ಜೋಯಿಸ : ಪುರೋಹಿತರಾ ಮಗಳೂ ಒಂದು ದಿನಾ ಏನೂ ಮಾಡಿದಳು ಅಂದ್ರೇ

ಋಗ್ವೇದಿ : ಜೋಯಿಸರೆ ಇದನ್ನೆ ಇಷ್ಟು ಹೊತ್ತು ತಗೊಳ್ಳುವ ಬದಲು ಸುಲಭವಾಗಿ ಹೀಗೆ ಹೇಳಿ ಬಿಡಬಹುದಪ್ಪ. (ರಾಗಬದ್ಧವಾಗಿ, ಶ್ಲೋಕದಂತೆ)
ಒಂದು ದಿನ
ಪುರೋಹಿತರ ಮಗಳು
ಒಂದು ದಿನ ಪುರೋಹಿತರ ಮಗಳು

ಪುರೋಹಿತರ ಮಗಳು ಒಂದು ದಿನ
ಆ ಪುರೋಹಿತರ ಮಗಳು ಒಂದು ದಿನ

ಶ್ರೋತ್ರಿ : ಹೀಗೂ ಹೇಳಬಹುದಪ್ಪ
(ಹರಿಕತೆ ಶೈಲಿಯಲ್ಲಿ)
ಪುರೋಹಿತರ ಏಕೈಕ ಮಗಳು
ಏನು ಮಾಡಿದಳು ಅಂದರೆ
ಮುಂದಿನ ಕತೆಯನ್ನು ಕೇಳುವಂತಹರಾಗಿ

ಜೋಯಿಸ : ಏನಪ್ಪಾ ಅಂದ್ರೆ ನಿಮಗಿಂತ ನಾನೇ ವಾಸಿ. ನೀವು ಹೇಳಿದರೆ ಮನುಷ್ಯರಿಗೆ ಅರ್ಥ ಆಗಲ್ಲ. ಋಗ್ವೇದಿಗಳು ಮಾತಾಡಿದ್ರೆ ಅದು ಏನೋ ಅಪ್ಪ. ಎಮ್ಮೆ ಗುಟ್ಕೆ ಹೊಡ್ದಂಗೆ ಕೇಳಿಸುತ್ತೆ. ಇನ್ನು ಶ್ರೋತ್ರಿಗಳು ಮಾತಾಡಿದ್ರೆ ಮಳೆಗಾಲದಲ್ಲಿ ಕಪ್ಪೆಗಳು ಒಟ್ಟಿಗೆ ವಟರ್ ವಟರ್ ಅಂದ್ಹಂಗೆ ಕೇಳಿಸುತ್ತಪ್ಪ.

ಋಗ್ವೇದಿ : ಹೋಗಿ ಬಿಡಿ ಜೋಯಿಸರೆ ನಮ್ಮ ನಮ್ಮಲ್ಲಿ ಚರ್ಚೆ ಯಾಕೆ? ಮೊದಲೇ ಅಂತಾರೆ ಜಾತಿಗೆ ಜಾತಿ ಹಗೆ ಅಂತ. ನೀವ್ಕತೆ ಮುಂದುವರೆಸಿ.

ಜೋಯಿಸ : ಮೈ ನೆರೆದ್ಲಂತೆ ಅಷ್ಟೆ. ಅದೂ ಅವಳಿಗೆ ಮದ್ವೆ ಮಾಡಿಲ್ಲ.

ಋಗ್ವೇದಿ : ಶಾಸ್ತ್ರದ ಪ್ರಕಾರ ಮಗಳ ಪ್ರತಿಯೊಂದು ರಜೋ ದರ್ಶನದಲ್ಲೂ ಅಪ್ಪ ನರಕಕ್ಕೇ ಹೋಗ್ತಿರ್ತಾನೆ.

ಶ್ರೋತ್ರಿ : ಅದೂ ಎಂಥ ನರಕ ಅಂತೀರಾ? ರೌರವ ನರಕ. ಮಗಳಿಗೆ ಮದ್ವೆ ಮಾಡ್ದೇ ಹೋದ್ರೆ ಅಪ್ಪ ನರಕದಲ್ಲಿ ಕುದಿಯುವ ಎಣ್ಣೆಯಲ್ಲಿ ಮುಳುಗಿ ಏಳಬೇಕು. ಆ ಪುರೋಹಿತಂಗೆ ಅಷ್ಟೂ ಗೊತ್ತಿಲ್ಲ.

ಜೋಯಿಸ : ನನ್ಕೇಳಿದ್ರೆ ಯಾವನ್ಗಾದ್ರು ಗಂಟು ಹಾಕ್ಬಿಡ್ತಿದ್ದೆ.

ಋಗ್ವೇದಿ : ಏನು ಗಂಟು ಹಾಕ್ತಿದ್ರಿ?

ಜೋಯಿಸ : (ಮತ್ತೊಮ್ಮೆ ಜನಿವಾರದಿಂದ ಬೆನ್ನು ತುರಿಸಿಕೊಳ್ಳುತ್ತ) (ಸ್ವಲ್ಪ ಕೆಮ್ಮುತ್ತ) ಏನಪ್ಪಾ ಅಂದ್ರೆ ನಾನೀಗ ಈ ವಿಷಯ ಹೇಳಿದ್ದು ಏತಕಂದ್ರೆ ನಮ್ಮ ಬ್ರಾಹ್ಮಣ ಜಾತಿ ಹಾಳಾಗ್ಬಾರ್ದು.

ಋಗ್ವೇದಿ : ಹೌದು ಹೌದು. ಶಿವ ಶಿವ.

ಜೋಯಿಸ : ಕುಲಾಚಾರ ದೊಡ್ಡು.

ಶ್ರೋತ್ರಿ : ಕುಲ ಇಲ್ಲ ಅಂದ್ರೆ ನಾವು ಉಳಿಯೋಕೆ ಆಗುತ್ತಾ?

ಜೋಯಿಸ : (ಅವರಿಬ್ಬರ ನಡುವೆ ಬಂದು ಕೈಯನ್ನು ಮುಂದೆ ಚಾಚಿ) ನಮಗಿಂತ ಜಾತಿ ದೊಡ್ಡದು ಅಂತ ಮಾತು ಕೊಡಿ. ಹಾಗೆಯೇ ಜೋಯಿಸರು ಹೇಳಿದ ಮಾತು ಕೇಳ್ತೀವಿ ಅಂತಲೂ ಹೇಳಿ. ಒಪ್ಪಿಗೇನಾ?

(ಇಬ್ಬರು ಕೈ ತಟ್ಟಿ ಭಾಷೆ ಕೊಡುವರು)

ಜೋಯಿಸ : ಮತ್ತೇನಿಲ್ಲ. ಶಾಸ್ತ್ರದ ಪ್ರಕಾರ ಹೆಂಡತಿ ರೋಗಿಷ್ಟೆಯಾದ್ರೆ, ಗಂಡನಿಗೆ ಸುಖ ಕೊಡ್ದೆ ಹೋದ್ರೆ ಎರಡ್ನೇ ಮದ್ವೆ ಆಗಬಹುದು ಅಂತ ಇದೆ. ನನ್ನ ಹೆಂಡ್ತೀಗೆ ಉಬ್ಬಸ, ಕೆಮ್ಮು, ನೀವು ನಂಬಲಿಕ್ಕಿಲ್ಲ. ಅವ್ಳು ಕಸಪೊರಕೆಯ ಕಡ್ಡಿ ಹಂಗಿದಾಳೆ. ಮುಟ್ಟಿದ್ರೆ ಅಯ್ಯೋ ಅಂತ ಅಳ್ತಾಳೆ. ಎಷ್ಟು ದಿನ ಈ ಬ್ರಹ್ಮಚರ್ಯ ನಂದು? ಅದಿಕ್ಕೆ ಪುರೋಹಿತರ ಮಗಳನ್ನ ಮದ್ವೇ ಮಾಡಿಸ್ಬಿಡಿ ಅಷ್ಟೆ. ಕುಲಾನೂ ಉಳಿದಂಗೆ ಆಗುತ್ತೆ. ಪುರೋಹಿತರು ನರಕಕ್ಕೆ ಹೋಗೋದು ತಪ್ಪುತ್ತೆ. ಅವಳಿಗೆ ಮುತ್ತೈದೆ ಭಾಗ್ಯವೂ ಸಿಗುತ್ತೆ.

ಋಗ್ವೇದಿ : ನಿಮ್ಮ ವಯಸ್ಸೆಷ್ಟು ಜೋಯಿಸರೆ?

ಜೋಯಿಸ : ಐವತ್ತಾರು ದಾಟಿ ಐವತ್ತೇಳು.

ಋಗ್ವೇದಿ : ಅವಳ ವಯಸ್ಸೆಷ್ಟು ಇರಬಹುದು ಜೋಯಿಸರೆ?

ಜೋಯಿಸ : ಹತ್ತು ಇರಬಹುದು.

ಋಗ್ವೇದಿ : ಅಷ್ಟು ಸಣ್ಣ ಹುಡುಗಿಯೆ ನಿಮಗೆ?

ಜೋಯಿಸ : ಹುಣಿಸೆ ಮರ ಮುಪ್ಪಾಗಲ್ಲ. ಏನೋ ಜಾತಿ ಉಳೀಲಿ ಅಂತ ಹೇಳ್ದೆ ಅಷ್ಟೆ. ಇನ್ನು ನಿಮ್ಮಿಷ್ಟ. ಜಾತಿ ಕೆಡಬೇಕು ಅಂದ್ರೆ ಕೆಡ್ಸಿ. ನಂಗೇನಾಗ್ಬೇಕಿದೆ. ಮೊದಲೇ ದೇಶದಲ್ಲೆಲ್ಲ ಬರಗಾಲ. ಜಾತಿಗೆಟ್ಟು

ಋಗ್ವೇದಿ : ಹೂಂ. ಮಾಡಿ ಮಾಡಿ ನೀವು ಮದ್ವೆ ಆಗಿ ಮಳೆ ಬರೋದಿದ್ರೆ ಬರ್ಲಿ.

ಶ್ರೋತ್ರಿ : (ವ್ಯಂಗ್ಯದಿಂದ) ಮಳೆ ಬರ್ತದೋ, ಬಿಡ್ತದೋ ಆದ್ರೆ ಜೋಯಿಸರಿಗೆ ಮತ್ತೊಂದು ಮುಂಡಾಸು ಬರೋದಂತು ಸತ್ಯ. ಇನ್ನು ಇವ್ರ ಅವತಾರ ನೋಡಿ ಹೆದರಿಕೊಳ್ಳದೇ ಇದ್ರೆ ಸಾಕಪ್ಪ ಆ ಹುಡ್ಗಿ.

ಜೋಯಿಸ : ನಾನು ಹೇಳಿದ ಒಂದು ಕೆಲಸ ಮಾಡಿ ಕೊಡಿ ಏನಪ್ಪಾ ಅಂದ್ರೆ.....

ಶ್ರೋತ್ರಿ : ಏನಪ್ಪಾ ಅಂದ್ರೆ... ಇನ್ನು ಮಾತ್ರ ಇಂಥ ಕೆಲ್ಸ ಹೇಳ್ಬೇಡಿ. ಆ ಹುಡುಗಿಗೆ ದೇವ್ರೇಗತಿ. ಅಯ್ಯೋ ಶಿವನೆ.

ಋಗ್ವೇದಿ : ಅಯ್ಯೋ ನಾರಾಯಣ

*****

(ದಲಿತರ ಕೇರಿ. ಗುಂಪು ಸೇರಿದ್ದಾರೆ. ಹಿನ್ನೆಲೆಯಲ್ಲಿ ಹಾಡು)

ಮಕ್ಕಳ ಮಾರ್‍ಯಾರು ಮಳೆರಾಯ

ಭತ್ತ ಭತ್ತಾಂತ ತಿರುಗ್ಯಾರು ಮಳೆರಾಯ.

(ಕುಡಿದ ಮತ್ತಿನಲ್ಲಿ ಕುಣಿಯುತ್ತಾರೆ) (ಹಾಡು ನಿಲ್ಲಲಾಗಿ.)

ಕರಿಯಜ್ಜ : (ಕೋಲು ಕುಟ್ಟುತ್ತಾ ಆಕಾಶ ನೋಡುತ್ತಾ) ಮಳಿನೂ ಇಲ್ಲ. ಬೆಳಿನೂ ಇಲ್ಲ.

ಅಜ್ಜಿ : ಆಕಾಸರಾಯ ನೀನು ಹೇಳ್ದಂಗೆ ಕೇಳಾಕೆ ನಿನ್ನ ಕಂಬ್ಳಿ ಒಳ್ಗೆ ಬಿದ್ಕಂಡವನೆ ಮತ್ತೇನೊ ಗೆಯ್ಮೆ ಅವನ್ಗೆ.?

ಯುವಕ : (ತೂರಾಡುತ್ತಾ) ಅದೇನು-ಬಿಡಮ್ಮಿ-ಆಕಾಸ ಸತ್ತೋಗ್ಲಿ. ಭೂಮೀನೆ ಹೇಳ್ದಾಂಗೆ ಕೇಳಾಕಿಲ್ಲ. ಕಾಲಿಟ್ಟರೆ ಕುಂಯ್ಯೋ ಅಂತಾದೆ.

ಕರಿಯಜ್ಜ : ಕಾಸಿಲ್ಲ ದುಗ್ಗಾಣೆ ಗತಿಯಿಲ್ಲ. ಅದರಲ್ಲೂ ಕಂಠಮಟ ಕುಡ್ಕೊಂಡು ಬಂದವನೆ (ಹಿಂದಿನಿಂದ ಹೆಂಗಸೊಬ್ಬಳು ಬಂದು)

ಹೆಂಗಸು : ಹೊಟ್ಟೆಗೆ ಹಿಟ್ಟುಬೇಡ. ಕುಡಿಯೋಕೆ ಮಾತ್ರ ಎಲ್ಲಿಂದ ಕಾಸು ಮಾಡ್ಕೊಂಡು ಮಾಡ್ಕೊಂಡು ಬತ್ತಾವನೋ?

ಯುವಕ : (ತೂರಾಡುತ್ತಾ ಹೆಂಗಸಿನ ಹತ್ತಿರ ಹೋಗಿ )

ನನ ಬಂಗಾರ, ಹೇಳಾಕಿಲ್ಲ. ಸಿಗ್ತು ಅಂದ್ರೆ ಸಿಗ್ತು

ಕುಡಿಯೋಕೆ ಕಾಸು ಸಿಗ್ತು

ನನ ಚಿನ್ನ ನಿಂಗೆ ಮಾತ್ರ ಏನೂ ಇಲ್ಲ.

ನಂಗೆ ನೀನು ಅಚ್ಚಿನ ಬೆಲ್ಲ

ಹೆಂಗಸು : ಯಾವಾಗ ನೋಡಿದ್ರೋನು...

ಕರಿಯಜ್ಜ : ಹಿಂಗಾದ್ರೆ ಎಂಗೆ ಮಗಾ?

ಯುವಕ : ಯಾರೋ ಕೊಟ್ರು ಕುಡ್ದೆ.

ಅಜ್ಜ : ಯಾರೋ ಕೊಟ್ರೆ- ಕಾಸು ತಂದ್ರೆ - ನಾಕು ಜನ ಹೊಟ್ಟೆಗೆ ಹಿಟ್ಟು

ಹೆಂಗಸು : ಗುಡಿಸಲ ತಾವ ಇರೋರು ಮನ್ಸೋರು ಅನ್ನೋದು.......

ಯುವಕ : ಅವ್ವಾ-ಅಲ್ಲಾ ಕುಡ್ದೆ ಅಂತಾ ಅಷ್ಟೊಂದು ಮಾತಾ?

ಕರಿಯಜ್ಜ : ಹಿಟ್ಟು ಬಿಟ್ಟು ಕುಡಿಬೇಕಾ?

ಹೆಂಗಸು : ಒಂದು ಗಡಿಗೆ ನೀರು ಕಾಣೋಕೆ ಹರದಾರಿ ದೂರ ನಡೀಬೇಕು. ಹೊತ್ತು ತರೋಷ್ಟರಲ್ಲಿ ಕರ್ಳುಕಿತ್ತು ಬತ್ತದೆ. ನಿಂಗೇನು ಗೊತ್ತು.

ಯುವಕ : ನಂಗೆ ಅಷ್ಟು ತಿಳ್ಯೋಕಿಲ್ಲಾ.

ಅಜ್ಜಿ : ಧುಗ್ಗಾಣೆಯಿಡಿಯದೆ ಬಂದೆಯಿಲ್ಲಿ ತನಕ.

ಯುವಕ : ಮೈ ಬಗ್ಸಿ ದುಡ್ಡ್ರೆ ನಾಕು ಕಾಸು ಅಂದ್ರೆ ಅದ್ರಲ್ಲಿ ಎರ್ಡು ಕಾಸು ಕಿತ್ತು ತಿಂತಾವು.

ಕರಿಯಜ್ಜ : ಎರ್ಡು ಕಾಸನಾದ್ರೂ...

ಹೆಂಗಸು ಎಲ್ಲಿ ತರ್ತಾನೆ?

ಯುವಕ : ಹಗ್ಲು-ರಾತ್ರಿ ದುಡ್ದು ಮೈನ ನೀರ್ ಮಾಡೋ ನನ್ನ ಸ್ಥಿತಿ ನಿಂಗೆ ಏನು ಗೊತ್ತು. ಸಂಜೆ ಹೊತ್ತಾಗೆ ಮೆಯೆಲ್ಲ ಗುದ್ದಿ ಗುದ್ದಿ ಹಣ್ಣು ಮಾಡ್ದಂಗೆ ಇರುತ್ತೆ. ರವಷ್ಟು ಕುಡ್ದಿಲ್ಲ ಅಂದ್ರೆ ನಾಳೆ ಕೆಲ್ಸಕೆ ಹೋಗಾಕಾಗಾಕಿಲ್ಲ.

ಹೆಂಗಸು : ಬೋ ನಾಟಕಕಾರ ನೀನು.

ಕರಿಯಜ್ಜ : ಸುಮ್ಕಿರವ್ವ

ಅಜ್ಜಿ : ಅದೇನಿದೆಯೋ ಅದನ್ನ ಬೇಯಿಸಿ ಹಾಕು.

ಹೆಂಗಸು : ಮಡ್ಕೆ ಇದೆ. ನೀರು ಇದೆ ಅಷ್ಟೆ. ಮಡ್ಕೇನಾ ಕವಚಿಟ್ಟು ಈ ಮಾಯ್ಕಾರ ಎಷ್ಟು ಹೊತ್ತಿಗೆ ಬರ್ತಾನೋ ಅಂತಾ ಕಾಯ್ತಾ ಕುಂತಿದ್ದೆ.

ಕರಿಯಜ್ಜ : ನಂಗೇನ್ ಹಸಿವೆ ಆಗಾಕಿಲ್ಲ ಬಿಡು.

ಅಜ್ಜಿ : ನಮ್ಗೆ ಒಳ್ಳೆ ಸಾವು ಕೊಡಪ್ಪಾ ಸಿವನೆ ಅಂತ ಕೇಳೋದೊಂದೆ ಉಳಿದಿದೆ. ಅಷ್ಟೇಯಾ. ಆದ್ರೆ ನಿಮ್ಗೆಲ್ಲಾ ಹಾಂಗ.

ಹೆಂಗಸು : ಈ ಬರಗಾಲದಲ್ಲಿ ಇನ್ನೇನು ಮಾಡೋಕ್ಕೆ ಸಾಧ್ಯ?

ಯುವಕ : (ಅಜ್ಜ ಅಜ್ಜಿಯನ್ನು ಉದ್ದೇಶಿಸಿ) ನೀವು ಹೋಗಿ ಮನ್ಕೋಳಿ ನಾನೇ ಹೊಟ್ಟೆಗೇನಾರ ತತ್ತೀನಿ.

(ಕರಿಯಜ್ಜ ಮತ್ತು ಮುದುಕಿ ಒಳಗಡೆ ಹೋಗುತ್ತಾರೆ)

ಹೆಂಗಸು : ದುಡ್ಡು ಬಂದಿದೀಯ. ನಿನ್ನ ಮುಖ ನೋಡುತ್ಲೆ ಕರುಳು ಚುರುಕ್ ಅನ್ನುತ್ತೆ. ನಿನ್ನ ಹೊಟ್ಟೆಗೆ

ಯುವಕ : (ಅವಳ ಹತ್ರ ಬಂದು) ನನ್ನ ಹೊಟ್ಟೆ ವಿಷಯ ಹಾಳಾಗಿ ಹೋಗ್ಲಿ. ನೀನೇನು ಮಾಡಿಯೆ

ಹೆಂಗಸು : ನಂಗೆ ಹಸಿವಾದರೆ ನಿನ್ನ ಕೈಯನ ನನ್ನ ಹೊಟ್ಟೆ ಮೇಲೆ ಇಟ್ಕೋತೀನಿ. ಆಗ ಹಸಿವೆ ಹಾರೋಗತ್ತೆ.

ಯುವಕ : ನಿಂಗೆ ನನ್ನ ಕಂಡ್ರೆ ಎಷ್ಟು ಪ್ರೀತಿನೇ (ಅವಳ ಗಲ್ಲ ತಟ್ಟಿ ನಿನ್ನನ್ನ ರಾಣಿ ಹಂಗೆ ನೋಡೋ ತಾಕತ್ತು ನನ್ನ ರಟ್ಟೆಗೆ....

ಹೆಂಗಸು : (ಅವಳ ಕೈಯನ್ನು ತೆಗೆದು ಅವನ ಕೆನ್ನೆಯ ಮೇಲೆ ಇಡ್ಕೋಂಡು) ನಂಗೆ ಇಷ್ಟು ಸಾಕು.

ಯುವಕ (ಅವಳ ಕೈಯನ್ನು ಹಿಡ್ಕೊಂಡು) ನಂಗೂ ಇಷ್ಟೇ ಸಾಕು. ಈಗ ನಮ್ಮಿಬ್ಬರ ಹೊಟ್ಟೆ-ಕರುಳು ಎಲ್ಲಾ ಆರಾಮನಿಸ್ತದ. ಈ ಬರಗಾಲದಲ್ಲೂ ನಂಗೆ ನೀನು ನಿಂಗೆ ನಾನು ಮಧ್ಯೆ ಕುಡಿಯಾಕೆ ಒಂಚೂರ ನೀರು ಸಿಕ್ಕಿದ್ರೆ ಸಾಕು.

ಹೆಂಗಸು : ನಾನು-ನೀನು; ನೀನು-ನಾನು ಇಷ್ಟೆಯಾ.

ಆಕಾಶ ಮೇಲೆ-ಕೆಳಗೆ ಭೂಮಿ ತಾಯಿ (ನಗುವರು)

**(ಕತ್ತಲೆ)**

**(ಆಸ್ಥಾನ)**

ಪಕ್ಕದಲ್ಲಿ ಮಂತ್ರಿ ಮತ್ತು ಸೇನಾಧಿಪತಿಗಳು

ಕೆಲವು ಕ್ಷಣ ನಿಶ್ಯಬ್ದ

ನವಾಬ : (ಒಮ್ಮೆ ಮಂತ್ರಿಯ ಮುಖ ನೋಡಿ, ಮತ್ತೊಮ್ಮೆ ಸೇನಾಧಿಪತಿಯು ಮುಖ ನೋಡಿ)

ಸಾಸಿವೆಯು ಕಾಳು ಬಿದ್ದರೂ ಕೇಳಿಸುವಂಥ ಮೌನ? ವಿಚಿತ್ರ ಅನಿಸುತ್ತಿದೆ. ಯಾವುದಾದರೂ ಅಹವಾಲು ಇದೆಯೆ?

ಮಂತ್ರಿ : ಹೇಳುವುದಕ್ಕೆ ಆಲೋಚಿಸುತ್ತಿದ್ದೇವೆ.

ನವಾಬ : ಆಡಳಿತಕ್ಕೆ ಸಂಬಂಧಿಸಿದ್ದು ಎಂದಾದರೆ ಹೇಳಬಹುದು. ಖಾಸಗಿ

ಸಮಾಲೋಚನೆಗೆ ಸಂಬಂಧಿಸಿದ್ದು ಎಂದಾದರೆ ರಹಸ್ಯ ಕೋಣೆಗೆ ಬರುವುದು. ಇಲ್ಲ, ನಿಮ್ಮ ವೈಯಕ್ತಿಕ ವಿಚಾರವಾದರೆ ಅದಕ್ಕೆ ನಾನು ತಲೆ ಹಾಕುವುದಿಲ್ಲ. ಅವರ ವೈಯಕ್ತಿಕ ಜೀವನ ಅವರವರಿಗೆ ಸಂಬಂಧಿಸಿದ್ದು. ಅದಕ್ಕೆ ಅವರು ಜವಾಬ್ದಾರರು. ಅದರ ಬಗ್ಗೆ ಯಾವ ಕುತೂಹಲವು ಇಲ್ಲ. (ಸ್ವಗತದಲ್ಲಿ) ಇನ್ನೊಬ್ಬರ ಖಾಸಗಿ ಜೀವನದ ರಹಸ್ಯಗಳನ್ನು ತಿಳಿದು ನಾನು ಮಾಡುವುದಾದರೂ ಏನು? ಅಸಂಖ್ಯ ರಾತ್ರಿಗಳಲ್ಲಿ ನನ್ನ ತಲೆಯ ತುಂಬಾ ನೂರೆಂಟು ಯೋಚನೆಗಳು ಬಂದು ಗುಂಗಿ ಹುಳದಂತೆ ಗುಯಿಂಗುಡುತ್ತವೆ. ಅದರಿಂದಲೇ ನನಗೆ ಪಾರಾಗಲು ಸಾಧ್ಯವಾಗಲಿಲ್ಲ.

ಸದಾ ರಕ್ತದ ವಾಸನೆ ಹೊಡೆಯುವ ಕೋಟೆ: ಅಧಿಕಾರ: ಕೊಳೆತು ನಾರುತ್ತಿರುವ ಬೇಗಂನ ಬಯಕೆಗಳ ತೋಳುಗಳಿಂದ ಪಾರಾಗಲು ಪ್ರತಿಕ್ಷಣವೂ ನಾನು ನನ್ನೊಳಗೆ ಯುದ್ಧ ಹೂಡುವುದನ್ನು ಈ ಮಂತ್ರಿಗೆ ಈ ಸೇನಾಧಿಪತಿಗೆ ತಿಳಿಸುವುದು ಹೇಗೆ? (ಮಂತ್ರಿಯ ಮುಖ ನೋಡಿ ಗಾಂಬೀರ್ಯದಿಂದ) ಸಿಂಹಾಸನದ ನಾಲ್ಕು ಕಾಲುಗಳಿಗೆ ರಾಜ: ಮಂತ್ರಿ: ಸೇನಾಪತಿ: ಪುರೋಹಿತ ಸಂಕೇತವೆಂದು ನಮ್ಮ ಸಖ ಹೇಳುತ್ತಿದ್ದ. ಆದ್ದರಿಂದ ಈ ವಿಷಯದಲ್ಲಿ ಆಡಳಿತಕ್ಕೆ ಸಂಬಂಧಿಸಿದಂತೆ ಯಾವ ಮುಚ್ಚು ಮರೆಯೂ ಬೇಡ.

ಸೇನಾಪತಿ : ಆದರೂ, ಕರುಳಲ್ಲಿರುವುದನ್ನು ನಾಲಿಗೆಗೆ ತರುವುದು ತುಂಬಾ ಕಷ್ಟ. ಯಾಕೆಂದರೆ

ಮಂತ್ರಿ : ನಾವು ಆಡಳಿತ ನಡೆಸುವವರು ಭಾವನೆಗಳನ್ನು ಮುಚ್ಚಿಟ್ಟು ಮಾತಾಡುವುದನ್ನು ಎಷ್ಟು ಅಭ್ಯಾಸ ಮಾಡಿದ್ದೇವೆಯೆಂದರೆ ಸದಾ ಬಿಗಿಯಾಗಿರುವ ನಮ್ಮ ಹುಬ್ಬುಗಳನ್ನು ಸಡಿಲವಾಗುವುದಿಲ್ಲ. ಹೆಂಡತಿ–ಮಕ್ಕಳ ಜೊತೆಗಿರುವಾಗಲೂ ನಮ್ಮ ಗಾಂಭೀರ್ಯ ಬಿಟ್ಟರೆ ಎಲ್ಲಿ ನಮ್ಮ ಸ್ಥಾನಮಾನ ಕಡಿಮೆಯಾಗುತ್ತದೆಯೋ ಎಂದು ನಗು ಬರುವಾಗಲು ಕರವಸ್ತ್ರವನ್ನು ಬಾಯಿಗೆ ಮುಚ್ಚಿ ನಗುವುದನ್ನು ಅಭ್ಯಾಸ ಮಾಡಿದ್ದೇವೆ.

ನವಾಬ : ಏನಿಲ್ಲವೆಂದರೂ ಅಧಿಕಾರ ಕೃತಕತೆಯನ್ನು ಕಲಿಸುತ್ತದೆ. ಮಾತಿನಲ್ಲಿ: ನಡಿಗೆಯಲ್ಲಿ: ನಗುವಿನಲ್ಲಿ –ಎಲ್ಲದರಲ್ಲೂ. ಬಹಿರಂಗವೊಂದು ವ್ಯಾಪಾರವಾಗಿರುತ್ತದೆ. ಅಂತರಂಗ ಅನ್ನುವುದು ತಂತಿಯ ಮೇಲಿನ

ನಡಿಗೆ. ಎದುರಾಳಿಗೆ ನಾವು ಏನು ಎಂಬುದನ್ನು ಅರ್ಥ ಮಾಡಿಕೊಳ್ಳಲು ಬಿಡಬಾರದು. ಚದುರಂಗದಾಟದಲ್ಲಿ ಬುದ್ಧಿ ಮತ್ತು ಏಕಾಗ್ರತೆ ಮಾತ್ರ ಮುಖ್ಯ. ಕಿವಿಗೆ ಅಲ್ಲಿ ಕೆಲಸವಿಲ್ಲ. ಹೃದಯದ ಪಿಸುನುಡಿಗೆ ಅಲ್ಲಿ ಅವಕಾಶವಿಲ್ಲ ಅಲ್ಲವೆ?

ಮಂತ್ರಿ : ಆದರೂ ಈ ಹೊತ್ತು ನಮ್ಮ ಮನಸು ವಿಚಲಿತವಾಗಿದೆ.

ನವಾಬ : ಯಾಕೆ ಅಂತ ಕೇಳಬಹುದೆ?

ಸೇನಾಪತಿ : ತಮ್ಮ ಮುಂದೆ ಅರಿಕೆ ಮಾಡಲೆಂದೇ ಇಷ್ಟೊಂದು ಯೋಚಿಸಿದೆವು.

ನವಾಬ : (ಕಿರುನಗೆಯೊಂದಿಗೆ) ಮಂತ್ರಿಗಳೇ, ನಾನು ಹದಿನಾರರ ವಯಸ್ಸಿನಲ್ಲಿ ಪಟ್ಟವೇರುವಾಗ ನನಗೆ ಸಾವಿರಾರು ಕನಸುಗಳಿದ್ದವು. ಆಗ ನಿಮಗೂ ಉತ್ಸಾಹವಿತ್ತು. ನನಗಿಂತ ಮೂರು ವರ್ಷ ಹಿರಿಯರು ನೀವು. ಸೇನಾಪತಿ ಐದು ವರ್ಷ ಹಿರಿಯರು. ಒಂದೇ ಕಾಲಕ್ಕೆ ನಾವು ಅಧಿಕಾರದ ಚುಕ್ಕಾಣಿಯನ್ನು ಹಿಡಿದೆವು. ಎಂಥಾ ಉತ್ಸಾಹವಿತ್ತು?

ಮಂತ್ರಿ : ನಿಮ್ಮ ತಂದೆಯವರ ಅಕಾಲ ಮರಣದಲ್ಲಿ ನೀವು ಅಧಿಕಾರದ ಸೂತ್ರ ಹಿಡಿಯಬೇಕಿತ್ತು. ಜನರ ಕಣ್ಣುಗಳು ಸಿಂಹಾಸನದ ಮೇಲಿದ್ದವು. ನಿಮ್ಮ ಬಿಸಿಯ ರಕ್ತ ಮತ್ತು ಜೀವನೋತ್ಸಾಹದ ಕಡೆಗೆ ಎಲ್ಲರೂ ನೋಡುತ್ತಿದ್ದರು.

ನವಾಬ : ಸರಿಯಾಗಿ ಎರಡು ವರ್ಷ ಬೇಕಾಯಿತು ಅಧಿಕಾರದ ವರಸೆ ಕಲಿಯಲು. ನಿಮ್ಮ ತಂದೆಯವರು ಮಂತ್ರಿ ಪದವಿ ನನಗೆ ಬೇಡ- ನನ್ನ ಮಗನನ್ನು ನೇಮಿಸಿಕೊಳ್ಳಿ ಎಂದು ಹೇಳಿದ್ದು ನನಗಿನ್ನೂ ನೆನಪಿದೆ. ಸೇನಾಪತಿಯೂ ಬಂದು ಸೇರಿಕೊಂಡರು. ಆದ್ದರಿಂದಲೇ ಹೇಳುತ್ತಿದ್ದೇನೆ. ಇಷ್ಟು ಸುಧೀರ್ಘ ಹಗಲು-ರಾತ್ರಿಗಳಲ್ಲಿ ನಾವು ಕೋಟೆ ಸುತ್ತಿದ್ದೆವು. ನಮ್ಮ ಖಡ್ಗಗಳು ಮೇಲೆ ಕೆಳಗೆ ಹರಿದಾಡಿದವು. ಕೋಟೆಯ ಪ್ರತಿಯೊಂದು ಕಲ್ಲುಗಳಲ್ಲಿಯೂ ನಮ್ಮ ಮೂವರ ಹೆಜ್ಜೆ ಗುರುತುಗಳಿವೆ.

ಮಂತ್ರಿ : ನಮ್ಮ ಹೆಗಲ ವಸ್ತ್ರವನ್ನು ನಿಮಗೆ ನೆರಳಾಗಲಿ ಎಂದು ನಿಮ್ಮ ತಲೆಗೆ ಅಡ್ಡಲಾಗಿ ಹಿಡಿದಿದ್ದೇವೆ.

ನವಾಬ : ಅದಕ್ಕೆ ನಾನು ಋಣಿ. ಋಣ ಸಂತೆಯಲ್ಲಿ ಬಿಕರಿಯಾಗುವುದಿಲ್ಲ. ಸ್ನೇಹ-ಪ್ರೀತಿ- ವಿಶ್ವಾಸಗಳಿಗೆ ಮಾತುಗಳ ಜೇಡರ ಬಲೆಯನ್ನು ನೆಯ್ದು ಸುಂದರಗೊಳಿಸಲಾಗುವುದಿಲ್ಲ.

ಸೇನಾಪತಿ : ನೀವು ಈಚೆಗೆ ಎರಡು ಸಂಗತಿಗಳನ್ನು ಗಮನಿಸಿಲ್ಲವೆಂದು ವಿಜ್ಞಾಪಿಸಲು ಇಷ್ಟಪಡುತ್ತೇನೆ ಜಹಂಪನಾ.

ನವಾಬ : ಹ್ಞಾಂ!

ಮಂತ್ರಿ : ರಾಜ್ಯದಲ್ಲೀಗ ತೀವ್ರ ಬರಗಾಲ. ಜನರು ಹಸಿವೆಯಿಂದ ಸಾಯುತ್ತಿದ್ದಾರೆ. ದನ ಕರುಗಳ ಹೆಣವನ್ನು ಹದ್ದುಗಳು ತಿನ್ನುತ್ತಿವೆ. ಮನುಷ್ಯರು ಬಿದಿರಕ್ಕಿ ಕುಟ್ಟಿ ತಿನ್ನುವ ಕಾಲ ಬಂದಿದೆ. ನೀರಿಗೆ ಹರದಾರಿ ನಡೆಯುತ್ತಿದ್ದಾರೆ. ಜನರ ಸಂಕಟ ಅತೀವವಾಗಿದೆ.

ಸೇನಾಪತಿ : ಪರಿಸ್ಥಿತಿಯು ತುಂಬಾ ಗಂಭೀರವಾಗಿದೆ. ಮಕ್ಕಳನ್ನೂ ಮಾರುತ್ತಿದ್ದಾರೆ. ಹೆಂಗಸರು ಮೈ ಮಾರಿ ಬದುಕುತ್ತಿದ್ದಾರೆ. ಮಳೆ ಬರುವ ಯಾವ ಲಕ್ಷಣವೂ ಕಾಣುತ್ತಿಲ್ಲ. ಕೆರೆಗಳು ಒಣಗಿವೆ. ಜನರು ವಲಸೆ ಹೋಗಲು ಪ್ರಾರಂಭಿಸಿದ್ದಾರೆ.

ನವಾಬ : (ಅಲೋಚಿಸುತ್ತಾ ತಿರುಗಾಡುತ್ತಾನೆ) ರಾಜ್ಯದ ಪರಿಸ್ಥಿತಿಯು ಮತ್ತೇನಾಗಿದೆ?

ಮಂತ್ರಿ : ಹೇಳುವುದಕ್ಕೆ ಬಾಯಿ ಬರುತ್ತಿಲ್ಲ. ಎಲ್ಲಿ ನೋಡಿದರೂ ಕಾಳು-ಕಡ್ಡಿಯದೇ ಸಮಸ್ಯೆ. ಬಡಪಾಯಿ ಜನರು ಸತ್ತ ಜಾನುವಾರುಗಳನ್ನು ಸುಟ್ಟು ತಿನ್ನುತ್ತಿದ್ದಾರೆ. ಕಾಯಿಲೆಯಿಂದ ನರಳುತ್ತಿದ್ದಾರೆ.

ನವಾಬ : ಉಳ್ಳವರು?

ಮಂತ್ರಿ : ಅವರು ಸಂಗ್ರಹಿಸಿದ ಧಾನ್ಯಗಳು ಅವರಿಗೆ ಇಮ್ಮಡಿ ಲಾಭ ತರುತ್ತಿವೆ.

ನವಾಬ : ಅದು ಹೇಗೆ?

ಮಂತ್ರಿ : ವರ್ತಕರು; ಉಳ್ಳವರು ದವಸ ಧಾನ್ಯಗಳಿಗೆ ಕಲಬೆರಕೆ ಮಾಡಿ ಮಾಡಿಸಿ ಮಾರುತ್ತಿದ್ದಾರೆ. ಕಾಳಸಂತೆಕೋರರು ತಮ್ಮ ದಂಧೆಯಲ್ಲಿ ಇಮ್ಮಡಿ ಲಾಭ ಮಾಡುತ್ತಿದ್ದಾರೆ.

ಸೇನಾಪತಿ : ರಾತ್ರಿಯ ವೇಳೆ ವೇಷ ಮರೆಸಿ ಗೂಢಚಾರರನ್ನು ಕಳಿಸಿ ನೋಡಿದರೆ-ಕಲಬೆರಕೆ ಮಾಲುಗಳು ರಾಶಿಗಟ್ಟಲೆ ಸಿಕ್ಕಿದವು. ಆದರೆ ನಾವು ಏನೂ ಮಾಡುವಂತಿರಲಿಲ್ಲ. ಬಡವರು ಜೀತಕ್ಕೆ ನಿಂತಿದ್ದಾರೆ. ಅವರನ್ನು ಅವರೇ ಮಾರಾಟ ಮಾಡಿ ಕುಟುಂಬ ಉಳಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ.

ಮಂತ್ರಿ : ಒಂದು ಸೇರಿನ ಬದಲಿಗೆ ಅರ್ಧ ಸೇರು ಕೊಟ್ಟು ಮೋಸ ಮಾಡ್ತಾರೆ. ಆದರೆ ಬಡವರಿಗೆ ಅದು ಗೊತ್ತಾಗುವುದಿಲ್ಲ. ಗೊತ್ತಾದರೆ ಅದನ್ನು

ಹೇಳುವ ಶಕ್ತಿ ನಾಲಿಗೆಗೆ ಇಲ್ಲ. ಅದು ಅವರ ರಟ್ಟೆಗೆ ಗೊತ್ತಾಗುತ್ತೆ. ನಾಲಿಗೆ ಮಾತ್ರ ಹೊರಳುವುದಿಲ್ಲ. ಬಡವರ ನೋವು ಕರುಳಲ್ಲಿರುವುದು ನಾಲಿಗೆಗೆ ತಲುಪುವುದಿಲ್ಲ.

ನವಾಬ : (ಯೋಚಿಸಿ) ಈಗ ಪರಿಹಾರ ಮಾತ್ರ ಕಂಡು ಹಿಡಿಯಬೇಕು ಇಲ್ಲವಾದರೆ ನಾವು ದುರ್ಬಲರಾಗುತ್ತೇವೆ. ನಮ್ಮ ಬೆನ್ನೆಲುಬಲ್ಲಿ ಶಕ್ತಿಯಿಲ್ಲವೆಂಬುದು ಜನರಿಗೆ ಸಾಬೀತಾಗುತ್ತದೆ. ಜನರ ಕಷ್ಟ ನಮ್ಮ ಮನಸ್ಸಿಗೆ ತಟ್ಟಬೇಕು..

ಮಂತ್ರಿ : ನೀವು ಹೇಳಿದ ಹಾಗೆ ........

ನವಾಬ : ಕಿಂಚಿತ್ತು ಯೋಚನೆ ಮಾಡಬೇಡಿ. ಶ್ರೀಮಂತರು: ಕಾಳಸಂತೆ ಕೋರರ ಮೇಲೆ ಯಾವುದೇ ಮುಲಾಜು ಇಲ್ಲದೆ ಅಂಕುಶ ಹಾಕಿ ತಿವಿದು ಬಿಡಿ. ದಾರಿಗೆ ಬರಲಿ. ಅವರಿಂದ ಹೆಚ್ಚು ಕಂದಾಯ ವಸೂಲಿ ಮಾಡಿ ಬಡವರಿಗೆ ಹಂಚಿ. ಶ್ರೀಮಂತರ ಮನೆಯಲ್ಲಿ ಕೂಡಿಟ್ಟ ದವಸ ಧಾನ್ಯಗಳು ಬೀದಿಗೆ ಬರಲಿ. ವ್ಯಾಪಾರಿಗಳ ಮೇಲೆ ಬಿಗಿಯಾದ ಪಹರೆಯನ್ನು ಹಾಕದೆ ಹೋದರೆ ಬೇರೆ ದಾರಿಯಿಲ್ಲ. ಅಲ್ಲಲ್ಲಿ ಆದಾಲತ್ ನಡೆಸಿ ತೀರ್ಮಾನ ಕೊಡಿ.

ಮಂತ್ರಿ : ಕುಡಿಯುವ ನೀರಿಗೆ....

ಸೇನಾಪತಿ : ದವಸ ಧಾನ್ಯವನ್ನು ನಮ್ಮ ಅರಮನೆಯ ಉಗ್ರಾಣದಿಂದ ಹಂಚಿ. ಹಾಗೆಯೇ ರಾಜ್ಯ ಬೊಕ್ಕಸದಿಂದ ಖರ್ಚು ಮಾಡಿ ಚಕ್ಕಡಿಯಿಂದ ನೀರಿನ ವ್ಯವಸ್ಥೆ ಮಾಡಿಸಿದರೆ ಹೇಗೆ? ಹೀಗೆ ಹೇಳಿದನೆಂದು ಅನ್ಯಥಾ ಭಾವಿಸಬಾರದು ಖಾವಂದರು.

ನವಾಬರು : ಅದೂ ಒಳ್ಳೆಯ ಆಲೋಚನೆಯೇ.

(ಅಷ್ಟು ಹೊತ್ತಿಗೆ ಸಖ ಬರುತ್ತಾನೆ)

ಸಖ : ಏನೋ ಗಹನವಾದ ಚಿಂತನೆಯು ನಡೆಯುವಂತೆ ತೋರುತ್ತದೆ.

ಮಂತ್ರಿ : ಏನಿಲ್ಲ. ಅಷ್ಟು ಗಂಭೀರವಾದ್ದಲ್ಲ.

ಸೇನಾಪತಿ : ಅದು ನಮಗೂ ಖಾವಂದರಿಗೂ ಸಂಬಂಧಿಸಿದ್ದು.

ನವಾಬ : ಅದೇನು ಮಹತ್ವದ್ದಲ್ಲ.

ಮಂತ್ರಿ : ರಾಜಕಾರಣದಲ್ಲಿ ಕೆಲವು ವಿಷಯಗಳು ಬರುತ್ತವೆ. ಹೋಗುತ್ತವೆ. ಅದಕ್ಕೆ ಭಾರೀ ಮಹತ್ವವಿದೆಯಿದೆಯುಂದಾಗಲೀ, ಮತ್ತೆ ಯಾವುದೇ.........

ಸಖಿ : ಮತ್ತೆ ಯಾವುದು?

ಮಂತ್ರಿ : ಏನಿಲ್ಲ ಬಿಡಿ. ಕೆಲವು ಹಾಗೆಯೇ ಉಳಿಯುವುದು ಒಳ್ಳೆಯದು.

ಸಖಿ : ನನ್ನನ್ನು ನೀವು ನಂಬುವುದಿಲ್ಲ ಎಂದಾಯಿತು. ನಂಬಿಕೆಗೆ ಅರ್ಹನಲ್ಲ ಎಂಬುದನ್ನು ನೀವು ಪರೋಕ್ಷವಾಗಿ ಹೇಳುತ್ತಿದ್ದೀರಿ. ಶಾಲುಸುತ್ತಿ ಕಾಶಿಯಲ್ಲಿ ಕಲಿತು ಬಂದವನು ನಾನು. ಚಳಿಗಾಲದಲ್ಲಿ ಗಂಗಾನದಿಯ ನೀರಲ್ಲಿ ಏಕಪಾದಿಯಾಗಿ ನಿಂತು ಕೈಗಳನ್ನು ಮೇಲೆತ್ತಿಕೊಂಡು ಸೂರ್ಯನನ್ನು ಧ್ಯಾನಿಸುವಾಗ ನನ್ನ ಮನಸ್ಸಿನಲ್ಲಿ ಸತ್ಯ ಒಂದನ್ನು ಬಿಟ್ಟು ಬೇರೆ ಏನನ್ನು ಹೇಳುವುದಿಲ್ಲವೆಂದು ಪ್ರಾರ್ಥಿಸುತ್ತಿದ್ದೆ. ಈಗ ನೋಡಿದರೆ ನೀವು ನಂಬುವುದಿಲ್ಲ. ಗೌರವವಿಲ್ಲದ ಜಾಗದಲ್ಲಿ ಶುನಕದಂತೆ ಬಾಳುವುದಕ್ಕಿಂತ ಗೌರವವಿರುವ ಜಾಗದಲ್ಲಿ ಗಂಜಿ ಕುಡಿಯುವುದು ಲೇಸು. (ಆಕ್ಷಿ). ಸತ್ಯವಂತೆ. ಶಕುನ ಹೇಳಿದೆ.

ನವಾಬ : ಶಕುನ ಹೇಳುತ್ತೋ ಬಿಡುತ್ತೋ ಅನ್ನೋದು ಗೊತ್ತಿಲ್ಲ. ಆದರೆ ಮುಚ್ಚಿಡುವಂತದ್ದು ಏನೂ ಇಲ್ಲ. ಇಡೀ ನಾಡು ಬರಗಾಲದಿಂದ ತರಗೆಲೆಯಂತೆ ನಡುಗುತ್ತಿದೆ. ಅದಕ್ಕೆ ಅರಮನೆಯ ಉಗ್ರಾಣದಿಂದ ದವಸ ಧಾನ್ಯಗಳನ್ನು ಬಿಡುಗಡೆ ಮಾಡುತ್ತಿದ್ದೇನೆ. ಶ್ರೀಮಂತರು ಸೊಕ್ಕು ಮುರಿಯಲು ಅವರಿಗೆ ಕಂದಾಯ ಹೆಚ್ಚು ಮಾಡುತ್ತೇನೆ.

ಸಖಿ : (ನಗುತ್ತಾ) ಒಳ್ಳೇ ಪರಿಹಾರ. ಅದಕ್ಕಿಂತ ನಾನು ಇನ್ನೊಂದು ಪರಿಹಾರ ಹೇಳ್ತಾ. ಈ ಬಡವರನ್ನೆಲ್ಲಾ ನಾಡಿನಾಚೆಗೆ ಕಳಿಸಿ ಬಿಡೋದಪ್ಪ. ಬರಗಾಲನೇ ಇರಲ್ಲ.

ಮಂತ್ರಿ : ಅದಕ್ಕಿಂತ ನೀವೇ ದೇಶಾಂತರ ಹೋದ್ರೆ ಇನ್ನೂ ಅನುಕೂಲ.

ಸಖಿ : ಅಯ್ಯಯ್ಯಪ್ಪ. ನನ್ನ ಹೆಂಡ್ರು ಮಕ್ಳ ಗತಿ?

ಸೇನಾಪತಿ : ಅದಕ್ಕೆ ನೀವ್ಯಾಕೆ ಯೋಚ್ನೆ ಮಾಡ್ತೀರಿ ನಾವು ಇದ್ದೇವೆ.

ನವಾಬ : (ಗಂಭೀರವಾಗಿ) ತಮಾಷೆ ಸಾಕು. ನನ್ನ ಮನಸ್ಸು ಕಳವಳಗೊಂಡಿದೆ.

ಮಂತ್ರಿ : ಇತ್ತೀಚಿನ ದಿನಗಳಲ್ಲಿ ನೀವು ಸಣ್ಣ ಪುಟ್ಟ ವಿಷಯಗಳಿಗೂ ನೋವಿನಿಂದ ವಿಲವಿಲನೆ ಒದ್ದಾಡ್ತೀರಿ. ನಿಮ್ಮ ಯಾತನೆ ನಿಮ್ಮ ಕಣ್ಣುಗಳಲ್ಲಿ ಎದ್ದು ಕಾಣಿಸುತ್ತೆ. ಬಸವಳಿದ ನಿಮ್ಮ ಮುಖದಲ್ಲಿ ನೂರೊಂದು ಗೆರೆಗಳು. ಇದ್ದಕ್ಕಿದ್ದಂತೆ ಆಸ್ಥಾನದಲ್ಲಿ ದೊಡ್ಡ ಕಂಬವನ್ನು ನೋಡುತ್ತಾ ನಿಟ್ಟುಸಿರು ಬಿಡುತ್ತೀರಿ. ಆ ನಿಟ್ಟುಸಿರಿನ

ಬಿಸಿ ಆಸ್ಥಾನದಲ್ಲಿ ಯಾರಿಗೆ ಅಲ್ಲವಾದರೂ ನಿಮ್ಮ ಜೊತೆಗಾರನಾದ ನನಗೆ ಅರ್ಥವಾಗುತ್ತದೆ ಜಹಾಂಪನಾ.

ಸಖಿ : ನನಗೂ ತುಂಬಾ ಎಂದರೆ ತುಂಬಾ ಅರ್ಥವಾಗುತ್ತದೆ. ಆದರೆ ಅರ್ಥವಾದುದನ್ನು ಹೇಳುವುದಕ್ಕೆ ನನ್ನ ಸಂಸ್ಕೃತದಲ್ಲಿ ಸರಿಯಾಗಿ ಪದಗಳು ಸಿಗುವುದಿಲ್ಲ. ನಾನು ಕಲಿತದ್ದು ತುಂಬಾ ಆಯ್ತು. ಆದರೆ ಇವರ ಆಲೋಚನೆ ಅದಕ್ಕಿಂತ ಹೆಚ್ಚಾಯಿತು. ಒಟ್ಟು ನನ್ನ ಭಾಷೆ ಮತ್ತು ಇವರ ಆಲೋಚನೆ ಹಲ್ಲು ಹೋದ ಅಜ್ಜ ಅಜ್ಜಿ ಮಾತಾಡಿದ ಕತೆ ಆಯ್ತು.

ಸೇನಾಪತಿ : ನಿಮ್ಗೆ ಔಚಿತ್ಯ ಪರಿಜ್ಞಾನ ಅಂತ ಒಂದು ಕಲಿಸಿರಬೇಕಲ್ವೆ

ಸಖಿ : ಕಲಿಸಿದ್ದಾರೆ, ಕಲಿಸಿದ್ದಾರೆ. ಔಚಿತ್ಯ ಅಂದ್ರೆ ಹೇಳ್ತೀನಿ.

(ಸ್ವಲ್ಪ ಯೋಚಿಸದಂತೆ ಮಾಡಿ) ನಮ್ಮ ಗುರುಗಳು ಅದೇನೋ ಹೇಳ್ತಿದ್ದರಪ್ಪ. ಔಚಿತ್ಯ ಪರಿಜ್ಞಾನ ಅಂದ್ರೆ ಅಗತ್ಯ ಬಿದ್ರೆ ಕಾಲುಂಗುರವನ್ನು ಕಿವಿಗೂ ಹಾಕ್ಕೋಬಹುದು ಅಂತ ಅಷ್ಟೆ. ಬೇರೇನೂ ವಿಶೇಷ ಇಲ್ಲ ಅದ್ರಲ್ಲಿ.

ಸೇನಾಪತಿ : ನಿಮಗೂ ನಿಮ್ಮ ಗುರುಗಳಿಗೂ ದೊಡ್ಡ ನಮಸ್ಕಾರ.

ಸಖಿ : (ಸೇನಾಪತಿಯ ಹತ್ತಿರ ಬಂದು) ನನಗೆ ನಮಸ್ಕಾರ ಹೇಳಿ ಅಡ್ಡಿಯಿಲ್ಲ. ನಾವಿಬ್ಬರೂ ಸಮಾನರು. ನಿಜ ಹೇಳ್ಬೇಕಂದ್ರೆ ನಾನು ನನ್ನ ಗುರುಗಳಿಗೆ ಒಂದೇ ಒಂದು ದಿನ ನಮಸ್ಕಾರ ಅಂತ ಹೇಳಿಲ್ಲ. ಗುರುಗಳು ಆ ಬೀದಿಯಲ್ಲಿ ಬರೋವಾಗ ಈ ಬೀದಿಯಲ್ಲಿ ಕುಂಡೆ ತಿರುಗಿಸಿ, ಮುಸುಡು ಓರೆ ಮಾಡ್ಕೊಂಡು, "ಭಟ್ಟ ಭಟ್ಟ ಸಂಸ್ಕೃತ ಭಟ್ಟ, ಹೂಸು ಬಿಟ್ಟ" ಅಂತ ಹಿಂದಿನಿಂದ ಗೇಲಿ ಮಾಡ್ಕೊಂಡು ಬಂದೆ. ಯಾರು ಗುರುವನ್ನು ಗೇಲಿ ಮಾಡ್ತಾರೋ ಅವ್ರು ಜಾಣರಾಗುತ್ತಾರೆ. ಇನ್ನೊಂದು ಗುಟ್ಟು ಹೇಳ್ಲಾ? ಅದ್ವಾ ಯಾರು ಗುರುಗಳ ತಂಬಿಗೆ ಹಿಡಕೊಂಡು ಓಡಾಡ್ತಾರೋ ಅವ್ರು ಮಹಾ ಶತದಡ್ಡರಾಗುತ್ತಾರೆ.

ಮಂತ್ರಿ : ಅನಾವಶ್ಯಕ ವಿಚಾರಗಳು, ಅನಗತ್ಯ ತಲೆಹರಟೆಗಳು!

ಸಖಿ : ಎದೆ ಮುಟ್ಟಿ, ಆಣೆ ಹಾಕಿ ಹೇಳ್ತೀನಿ ನಾನು. ಶಿಷ್ಯರಲ್ಲಿ ಎರಡು ಜಾತಿ. ತಂಬಿಗೆ ಶಿಷ್ಯರು ಒಂದು ಜಾತಿ. ಅವ್ರು ಬೆಳಿಗ್ಗೆ ಗುರುಗಳು ಎದ್ದ ತಕ್ಷಣ ತಂಬಿಗೆಯಲ್ಲಿ ನೀರು ಹಿಡ್ಕೊಂಡು ಹೋಗ್ತಾರೆ

ಅಷ್ಟೆ. ತಂಜಿಗೆ ಮಾಣಿಗಳು. (ಪ್ಪಾ ಪ್ಪಾ ಪ್ಪಾ) ಇನ್ನೊಂದು ಜಾತಿ ನಮ್ಮಂಥವರದ್ದು. ತಿಕದ ತುಂಬಾ ಸೊಕ್ಕು ತುಂಬ್ಕೊಂಡು ಗುರುಗಳಿಗೆ ಹಿಂದಿಂದ ಬಯ್ಕೊಂಡು, ಎದುರು ಬಂದಾಗ ಹಲ್ಲು ಗಿಂಜೋದು. ನಮಗೆ ನಿಜವಾಗಿ ತುಂಬಾ ಅವಕಾಶ ಇರೋದು ಬೇಕಿದ್ದರೆ ಯಾರಿಗಾದ್ರೂ ಕೇಳಿ ನೋಡಿ.

ನವಾಬ : ನವಾಬರ ನಡವಳಿಕೆಯನ್ನು ಅರ್ಥವಮಾಡಿಕೊಳ್ಳುವುದು ಕಷ್ಟವಾಗುತ್ತಿದೆ. ನಾವೂ ಏನೂ ಮಾಡುವಂತಿಲ್ಲ. ಒಂದರ್ಥದಲ್ಲಿ ಗೆರೆಯೊಳಗೆ ಇದ್ದೇವೆ. ಗೆರೆಯನ್ನು ದಾಟುವ ಅಧಿಕಾರ ನಮಗೂ ಇಲ್ಲ. ಆದಂತೆ ಆಗುತ್ತದೆ. ನಡೆದಂತೆ ನಡೆಯುತ್ತದೆ. ಸೇನಾಪತಿಗಳೇ ನೆರಳುಗಳಿಗೆ ಸ್ವತಂತ್ರ ಅಸ್ತಿತ್ವವಿಲ್ಲ ಅಷ್ಟೆ. ಈ ರಾಜಕೀಯದಲ್ಲೂ ಅಷ್ಟೆ ಬನ್ನಿ.

(ತೆರಳುತ್ತಾರೆ)



## ದೃಶ್ಯ 3

[ಬೇಗಂ ಸಂಜೆಯ ಹೊತ್ತು ಯಾರನ್ನೋ ಕಾಯುತ್ತಿರುವಂತೆ ಶತಪಥ ತಿರುಗುತ್ತಿದ್ದಾಳೆ]

ಬೇಗಂ : (ಸ್ವಗತ) ಈ ನವಾಬನ ಅರಮನೆಯ ಹೊಸ್ತಿಲು ತುಳಿಯುವಾಗ ಅವನ ತಲೆಗೂದಲು ಮಾತ್ರ ಬಿಳಿಯಾಗಿದೆ. ಎಂದು ಭಾವಿಸಿದ್ದೆ. ನನಗೆ ಬೇರೆ ಯಾವುದೂ ಹೊಳೆಯಲೇ ಇಲ್ಲ. ಹೊಳೆಯುವ ವಯಸ್ಸಾಗಿರಲಿಲ್ಲ. ನೋಡುತ್ತಾ ಹೋದಂತೆ ನವಾಬನ ಮನಸ್ಸು ವೃದ್ಧಾಪ್ಯದಿಂದ ನಡುಗುತ್ತಿದೆಯೆಂದು ಅನಿಸಿತು. ಈಗ ನೋಡಿದರೆ ಅಷ್ಟು ಮಾತ್ರವೇ ಅಲ್ಲ. ಅವನು ಸ್ವಾರ್ಥಿ. ತನ್ನ ಸ್ವಂತವನ್ನು ನೋಡಿಕೊಳ್ಳುತ್ತಾನೆ. ರಾತ್ರಿಯಿಡೀ ಯಾವುದನ್ನೋ ಹಲುಬುತ್ತಾನೆ. ನಿದ್ದೆಯಲ್ಲಿ ಕನವರಿಸುತ್ತಾನೆ. ಅಳುತ್ತಾನೆ. ಇದ್ದಕ್ಕಿದ್ದಂತೆ ಎದ್ದು ಕುಳಿತು ಕೈಮುಗಿಯುತ್ತಾನೆ. ಆದರೆ ನನಗೆ ಅವನ ಬಗ್ಗೆ ಈಗ ಯಾವ ಕನಿಕರ ಉಳಿದಿಲ್ಲ. ಯಾವಾಗ ಅವನು ನನ್ನ ಮನಸ್ಸನ್ನು ಮುರಿದು ಪುಡಿ ಮಾಡಿದನೋ ಅಂದಿಗೆ ಅವನ ಕುರಿತು ವಿದಾಯ ಹೇಳಿದ್ದೇನೆ. ಸಮಯ ಕಾಯುವುದು ಮಾತ್ರ ಗೊತ್ತು.

(ಸಖಿ ಬರುತ್ತಾನೆ. ಈಗ ಅವನ ವೇಷ ಬದಲಾಗಿದೆ. ಗಂಭೀರವಾಗಿ ಬರುತ್ತಾನೆ)

ಸಖಿ : ತಮ್ಮನ್ನು ಕಾಣಲು ತಮ್ಮ ಸಖಿ ಹೇಳಿದಳು. ಅದಕ್ಕೆ ಬಂದೆ. ನನ್ನ ಪರಿಚಯ ಇರಲಾರದು.

ಬೇಗಂ : ಗೊತ್ತು.

ಸಖಿ : ಗೊತ್ತೆ?

ಬೇಗಂ : (ವ್ಯಂಗ್ಯವಾಗಿ) ನವಾಬರ ಖಾಸಾ ಸ್ನೇಹಿತರು. ಸುಖ-ದುಃಖಗಳನ್ನು ಹಂಚಿ ಉಣ್ಣುವವರು. ಕೆಲವರಿಗೆ ಅಷ್ಟೆ- ಕಟ್ಟಿಕೊಂಡ ಹೆಂಡತಿಗಿಂತಲೂ ಜೊತೆಗಾರರೇ ಹೆಚ್ಚು ಆತ್ಮೀಯರು.

ಸಖ : ನೀವು ವ್ಯಂಗ್ಯವಾಡುತ್ತಿದ್ದೀರಿ?

ಬೇಗಂ : ಆದರೂ ನವಾಬರ ಆತ್ಮೀಯರು. ಇಲ್ಲಿಗೆ ಬರಲು ನಾನು ಹೇಳಿಲ್ಲ.

ಸಖ : ಅದೇ ತಾವು ತಪ್ಪು ತಿಳಿದುಕೊಂಡದ್ದು.

ಬೇಗಂ : ಕಣ್ಣಿಗೆ ಕಾಣುವುದಕ್ಕೆ ಬೇರೆ ಸಾಕ್ಷಿ-ಆಧಾರ ಬೇಕಿಲ್ಲ.

ಸಖ : ಅದು ತರ್ಕಕ್ಕೆ ಸಂಬಂಧಿಸಿದ್ದು. ತಾರ್ಕಿಕರು ಯಾವಾಗಲೂ ತರ್ಕದಲ್ಲಿಯೇ ಎಲ್ಲವನ್ನು ಇತ್ಯರ್ಥ ಮಾಡುತ್ತಾರೆ. ಆದರೆ ಅದರಾಚೆಗೆ ಕೆಲವು ಸತ್ಯಗಳಿರುತ್ತವೆ.

ಬೇಗಂ : (ಮತ್ತೆ ವ್ಯಂಗ್ಯದಿಂದ) ಅದು ಹೇಗೊ? ನಾವು ಹೆಂಗಸರು. ಹೆಂಗಸರಿಗೆ ಬುದ್ಧಿ ಕಡಿಮೆ ತಮ್ಮಂಥವರು ಹೇಳುತ್ತಲೇ ಬಂದಿದ್ದೀರಿ.

ಸಖ : ಹೋಗಲಿ. ಚರ್ಚೆ ಮಾಡುವುದಕ್ಕೆ ಇದು ಚರ್ಚಾಕಣವಲ್ಲ; ನ್ಯಾಯಾಸ್ಥಾನವಲ್ಲ. ನಮಗೆ ಮಾತು ಬಂಡವಾಳ. ಈ ಬಂಡವಾಳದಿಂದ ತುಂಬಾ ಸಾಧಿಸಿದ್ದೇವೆ. ಮಾತು ಗೊತ್ತಿರೋನು ನೀರಿಲ್ಲದಲ್ಲಿಯೂ ಬದುಕಿಯಾನು. ಮಾತು ನಮ್ಮ ಹೊಟ್ಟೆ ತುಂಬಿಸುತ್ತೆ. (ತೇಗುತ್ತಾನೆ) ನೋಡಿ-ಇದು ಸಾಕ್ಷಿ.

ಬೇಗಂ : ಇದು ಹೆಚ್ಚಾದರೆ ವಾಂತಿಯೂ ಆಗಬಹುದು. ನೆನಪಿಡಿ.

ಸಖ : ಅದಕ್ಕೆ ನಮ್ಮಲ್ಲಿ ಬೇರೆ ವ್ಯವಸ್ಥೆಯೂ ಉಂಟು. ತಾವು ಅನ್ಯಥಾ ಭಾವಿಸದಿದ್ದರೆ ಹೇಳುತ್ತೇನೆ. ನಮ್ಮ ಭಾಷೆಯಲ್ಲಿ ಹೇಳಿದರೆ ಅದು ಸಭಾ ಮರ್ಯಾದೆ ಮೀರಿದ-ಅನಾಗರಿಕ ಭಾಷೆ ಅಂತನ್ನಿಸುತ್ತದೆ. ಹೆಂಗಸರ ಎದುರು ನಾವು ಮರ್ಯಾದೆ ಬಿಟ್ಟು ಮಾತಾಡುತ್ತೇವೆ ಅಂತ ತಿಳ್ಕೋಬಾರದು. ಹೆಚ್ಚು ಹೊಟ್ಟೆ ತುಂಬಿದರೆ ತೇಗು ಇಲ್ಲವೆ ಅಪಾರ ವಾಯು. ಅಶ್ಲೀಲ ಅನಿಸಿದರೆ ಕ್ಷಮಿಸಿ. ಈ ಮಾತು ತಮ್ಮಂಥವರ ಎದುರಿನಲ್ಲಿ ಹೇಳುವುದಲ್ಲ ಎಂದು ನನಗೆ ಗೊತ್ತು.

ಬೇಗಂ : ಇಂಥ ಹಳಸಲು ಮತ್ತು ಎಂಜಲು ಮಾತುಗಳನ್ನು ನವಾಬರ ಹತ್ರ ಹೇಳಿ. ಈ ಮಾತುಗಳು ನನ್ನೆದುರಿನಲ್ಲಿ ನಡೆಯೋಲ್ಲ.

ಸಖ : ನೀವು ಗಟ್ಟಿ ಹೆಂಗಸು. ಅದರಲ್ಲಿಯೂ ಮಹಾನ್ ಧೈರ್ಯವಂತೆ. ತುಂಬಾ ಸುಂದರಿ. (ರಂಗದ ಎದುರು ಬಂದು) ಹೆಂಗಸರನ್ನು

ಎದುರು ಹೊಗಳಬೇಕು. ಅದಕ್ಕೆ ಬಗ್ಗದಿದ್ದವರು ಇಲ್ಲ. ಕಬ್ಬಿಣವನ್ನು ಕಾಯಿಸಿ ಬಡಿಯಬೇಕು. ನಾಯಿಯನ್ನು ಹೊಡೆದು ಬುದ್ಧಿ ಕಲಿಸಬೇಕು. ಹೇಗೆ ನನ್ನ ತಲೆ? (ತನ್ನ ತಲೆಯನ್ನು ಮುಟ್ಟಿ ನೋಡುವನು) ಅದಕ್ಕೇ ಹೇಳುವುದು ಬ್ರಾಹ್ಮಣರಿಗೆ ತಲೆಯಿದೆ ಅಂತ.

ಬೇಗಂ : ಈ ಮಾತು ಬೇಕಿಲ್ಲ ನನಗೆ. ಇದರಿಂದ ನನಗೆ ಯಾವ ಉಪಯೋಗವೂ ಇಲ್ಲ.

ಸಖ : (ಸ್ವಗತ) ಕಬ್ಬಿಣ ಇನ್ನೂ ಸರಿಯಾಗಿ ಕಾದಿಲ್ಲ.

ಬೇಗಂ : ಮಾತು ನೇರವಾಗಿರಲಿ. ಹಿಡಿತದಲ್ಲಿರಲಿ ಅಷ್ಟೆ.

ಸಖ : (ಧೋತ್ರವನ್ನು ಸರಿಪಡಿಸಿಕೊಂಡು, ಗಂಟಲು ಸರಿಪಡಿಸಿ) ಇಲ್ಲ-ನಿಜ ಹೇಳ್ತೇನೆ. ನಿಮ್ಮ ಮನಸ್ಸಿನಲ್ಲಿ ಏನಿದೆಯೋ ಅದನ್ನು ಹೇಳಿ. ಅದಕ್ಕೆ ಸರಿಯಾದ ಉತ್ತರ ಕೊಡ್ತೇನೆ.

ಬೇಗಂ : ನಿಮ್ಮನ್ನು ನಂಬುವುದು ಹೇಗೆ?

ಸಖ : ನನ್ನ ಜನಿವಾರದ ಆಣೆ.

ಬೇಗಂ : ಅದನ್ನು ನಾನು ನಂಬಬೇಕಲ್ಲ.

ಸಖ : ನಿಮ್ಮ ಕೈಯ ಮೇಲೆ ಕೈಯಿಡುವ ಆಣೆ ಹೇಳುತ್ತೇನೆ.

ಬೇಗಂ : ನೀವು ನನ್ನ ಕೈಮೇಲೆ ಕೈಯಿಡುವ ಆಸೆಯಿಟ್ಟುಕೊಳ್ಳಬೇಡಿ.

ಸಖ : (ಸ್ವಗತ) ಸಣ್ಣ ಆಸೆಯಿತ್ತು-ಸ್ಪರ್ಶ ಸುಖಲಾಭ. (ಬೇಗಂನ ಕಡೆಗೆ ತಿರುಗಿ) ಬೇಡವಾದರೆ ಬೇಡ. ನೀವು ನಂಬುವುದಕ್ಕೆ ನಾನು ಏನು ಮಾಡಬೇಕು ಹೇಳಿ?

ಬೇಗಂ : ನಿಮಗೆ ಮಕ್ಕಳೆಷ್ಟು? ನಿಮ್ಮ ಮಕ್ಕಳ ಮೇಲೆ ಆಣೆಯಿಟ್ಟು ಹೇಳಿ.

ಸಖ : ಸರಿ-ನನ್ನ ಮಕ್ಕಳ ಮೇಲೆ ಆಣೆ.

ಬೇಗಂ : ಹಾಗೆ ಬನ್ನಿ -ದಾರಿಗೆ

ಸಖ : ದಾರಿ ತಪ್ಪುವ ಮಗ ನಾನಲ್ಲ.

ಬೇಗಂ : ನನ್ನ ವಿಷಯದಲ್ಲಿ ಅದು ಬೇಕಿಲ್ಲ ಅಂತ ಹೇಳಿದೆ.

ಸಖ : (ಸ್ವಗತ) ನಾನು ದಾರಿ ತಪ್ಪುವುದಿಲ್ಲ ಅಂತ ಹೇಳಿದೆ. ಇವರನ್ನೂ ದಾರಿ ತಪ್ಪಿಸದೇ ಹೋದರೆ ತೊಟ್ಟದ್ದು ಜನಿವಾರವಲ್ಲ. ಬಿಟ್ಟದ್ದು ಜುಟ್ಟಲ್ಲ. ಕಲಿತದ್ದು ವಿದ್ಯೆಯಲ್ಲ. ಅಹಂಕಾರಿ ಹೆಂಗಸು ಹಾದಿ

ತಪ್ಪಲು ನೂರು ಹಾದಿಗಳಿವೆ. (ಬೇಗಂನ ಕಡೆಗೆ ತಿರುಗಿ ವಿನಯದಿಂದ) ಈಗ ನಂಬಿಕೆ ಬಂತೆ?

ಬೇಗಂ : ಸ್ವಲ್ಪ ನಂಬಿಕೆ ಬಂತು.

ಸಖ : ಧನ್ಯನಾದೆ. ತಮ್ಮಂಥವರ ನಂಬಿಕೆ ಬರಲು ತಪಸ್ಸು ಮಾಡಬೇಕು.

(ಸಖಿಯು ಬರುವಳು)

ಬೇಗಂ : ನೀನ್ಯಾಕೆ ಇಲ್ಲಿಗೆ ಬಂದೆ?

ಸಖಿ : ಇಲ್ಲ-ಕಣ್ರವ್ವ-ನಾನು ಹೇಳಿದ್ದು ಇವರನ್ನೇ ಎಂದು ಹೇಳಲು ಬಂದೆ.

ಬೇಗಂ : ಸರಿ-ನಡೆ. ಮತ್ತೊಮ್ಮೆ ಬಂದ್ರೆ ಸಿಗ್ದು ಬಿಡ್ತೀನಿ.

(ಸಖಿ ಹೋಗುತ್ತಾಳೆ)

ಸಖ : (ಸ್ವಗತ) ಅಬ್ಬಾ, ಯಾವ ಥರದ ಸಿಟ್ಟು ಇದು? ಹೆಣ್ಣು ಹುಲಿ ಸರಿಯಾಗಿ ಹಸಿದಿದೆ. ಮಾಂಸದ ತುಂಡು; ಅಧಿಕಾರದ ದಾಹ; ಸೌಂದರ್ಯದ ಹೆಮ್ಮೆ; ಸ್ವಾರ್ಥ; ಯೌವನ ಎಲ್ಲವೂ ಸೇರಿಕೊಂಡ ಮದವಿದು. ಇದರ ಮೇಲೆ ಸವಾರಿ ಮಾಡಲು ನನಗೆ ಕಲಿಸಬೇಕೆ? ಕಾಶಿಯಲ್ಲಿ ಕಲಿತ ವಿದ್ಯೆ?

ಬೇಗಂ : (ಸ್ವಗತ) ಇವನಿಗೂ ನನ್ನ ಚರ್ಯೆಗಳು ತಿಳಿಯಲಿ ಎಂದು ಸಖಿಗೆ ಬೈದೆ. ಎಲ್ಲಿ ಚುರುಕು ಮುಟ್ಟಿಸಿದರೆ ಎಲ್ಲಿ ಉರಿಯುತ್ತದೆ ಎನ್ನುವುದು ನನಗೆ ಚೆನ್ನಾಗಿ ಗೊತ್ತು. ನವಾಬನಿಗೆ ಮಂಕು ಬೂದಿ ಎರಚಿದಂತೆ ನನಗೆ ಎರಚಲಾರ.

(ಇಬ್ಬರೂ ತಿರುಗಿ ಮುಖನೋಡಿ ಪರೀಕ್ಷಿಸಿಕೊಳ್ಳುವರು. ಮೌನ.)

ಬೇಗಂ : ನನಗೆ ಬೇರೆ ಏನೂ ಬೇಕಾಗಿಲ್ಲ. ಈವತ್ತು ಆಸ್ಥಾನದಲ್ಲಿ ಏನು ನಡೆಯಿತು ವಿವರಬೇಕು.

ಸಖ : ಅದಕ್ಕೆ ಇಷ್ಟು ಮಾತೆ? ಬರಗಾಲ ಅಂತ- ಅರಮನೆಯ ಆಹಾರ ದಾಸ್ತಾನು ಕೇಂದ್ರದಿಂದ ದವಸಧಾನ್ಯವನ್ನು ನವಾಬರು ಬಿಡುಗಡೆ ಮಾಡಿದ್ದಾರೆ. ಶ್ರೀಮಂತರಿಗೆ ಹೆಚ್ಚು ಕರವಿಧಿಸಿ ಬಡವರಿಗೆ ಹಂಚುವಂತೆ ರಾಜಾಜ್ಞೆ ಹೊರಡಿಸಿದ್ದಾರೆ. ಅಷ್ಟೆ.

ಬೇಗಂ : ಅಷ್ಟೆ?

ಸಖ : ಅಷ್ಟೆ.

ಬೇಗಂ : ಇದರಿಂದ ರಾಜ ಬೊಕ್ಕಸದ ಗತಿ?

ಸಖಿ : ರಾಜ ಬೊಕ್ಕಸ ಖಾಲಿಯಾಗಬಹುದು.

ಬೇಗಂ : ಮಂತ್ರಿಗಳು ಒಪ್ಪಿದರೆ?

ಸಖಿ : ಮಂತ್ರಿಗಳು, ಸೇನಾಪತಿಗಳು ಒಪ್ಪಿದರು.

ಬೇಗಂ : ಶುಭ ಸೂಚನೆಯಂತೂ ಅಲ್ಲ.

ಬೇಗಂ : ಮುಂದಿನ ಸಲಹೆ ನಿಮ್ಮಿಂದ ಬೇಕಿಲ್ಲ. ನೀವಿನ್ನು ಹೊರಡಿ. ಬೇಕಾದಾಗ ಕರೆಸುತ್ತೇನೆ. ವಿಷಯ ರಹಸ್ಯವಾಗಿರಲಿ. ಒಂದು ವೇಳೆ....

ಸಖಿ : ರಹಸ್ಯ ಹೊರಗೆ ಬಿದ್ದರೆ ನನ್ನ ನಾಲಿಗೆಯನ್ನು ಕತ್ತರಿಸಿ ನೀವು ನಾಯಿಗೆ ಹಾಕುತ್ತೀರಿ. ನಮಸ್ಕಾರ. ಬರುತ್ತೇನೆ. ನಮ್ಮ ಸ್ನೇಹಕ್ಕೆ ಅಡ್ಡಗೋಡೆ ಏಳದಂತೆ ಕಾಶಿ ವಿಶ್ವನಾಥನಲ್ಲಿ ಪ್ರಾರ್ಥಿಸುತ್ತೇನೆ.

ಬೇಗಂ : ನೀವು ಬರಬಹುದು ಅಂದೆ. ಅಷ್ಟೆ. (ತೆರಳುತ್ತಾಳೆ)

ಸಖಿ : (ಗೊಣಗುತ್ತಾ) ಅಹಂಕಾರಕ್ಕೆ ತುದಿ-ಮೊದಲಿಲ್ಲ ಅಹಂಕಾರ ಅವನತಿಯ ಮೆಟ್ಟಿಲು! (ಕೈ ಬೆರಳು ಮಡಚುತ್ತಾ) ಒಂದು-ಎರಡು-ಮೂರು-ನಾಲ್ಕು-ತಿಂಗಳು ಸಾಕು. ಅಹಂಕಾರದ ಮದ ಮುರಿಯುವುದು.



## ದೃಶ್ಯ 4

(ನವಾಬ ಸಾಮಾನ್ಯ ದಾರಿ ಹೋಕನಂತೆ ಹೋಗುತ್ತಿದ್ದಾನೆ. ಅರೆಗತ್ತಲು. ಏಕಾಂತ)

ನವಾಬ : (ಸುಸ್ತಾದವನಂತೆ. ಮರದ ಕೆಳಗೆ ಕುಳಿತುಕೊಳ್ಳುತ್ತಾನೆ) (ಸ್ವಗತ)
ಆ ದಿನಗಳು ನೆನಪಿಗೆ ಬರುತ್ತವೆ.
ಎಷ್ಟು ಮರೆಯಬೇಕೆಂದರೂ ಆಗುತ್ತಿಲ್ಲ.
ಆಗ ವಯಸ್ಸು ಹತ್ತು.
ಸಂಜೆ. ನಮಾಜಿನ ವೇಳೆ–
ನೆನಪಿಸಿಕೊಂಡರೆ ಭಯವಾಗುತ್ತದೆ. ಈಗಲೂ.

(ಕತ್ತಲೆ–ಬೆಳಕು)

(ನವಾಬ ಮಧ್ಯ ಭಾಗದಲ್ಲಿ ಕುಳಿತಿರುತ್ತಾನೆ. ಅವನ ಸುತ್ತ ಹೆಣ್ಣಿನ ಆಕೃತಿಯೊಂದು ಕೈಯಲ್ಲಿ ಬೆಂಕಿ ಹಿಡಿದು, ಕಪ್ಪು ವಸ್ತ್ರಧರಿಸಿ ಕುಣಿಯುತ್ತಾಳೆ.)

ಪ್ರೇತ : ನೆನಪಿದೆಯಾ?

ನವಾಬ : (ಹೆದರಿಕೊಂಡು) ನೆನಪಿದೆ.

ಪ್ರೇತ : ನಾನು ಯಾರು?

ನವಾಬ : ನೀನು–ನೀನು–

ಪ್ರೇತ : ನಾನು–ಹೇಳು.

ನವಾಬ : (ಹೆದರುತ್ತಾ) ನನ್ನ ಬಾಲ್ಯದಲ್ಲಿ ನನ್ನ ಹತ್ತಿರ ಬಂದವಳು.

ಪ್ರೇತ : ಆಗ ನೀನು ಏನು ಮಾಡಿದೆ?

ನವಾಬ : (ಮೌನ)

ಪ್ರೇತ : ಯಾಕೆ ಮಾಡಿದೆ?

ನವಾಬ : (ಹೆದರುತ್ತಾ) ನೀನು ಅರೆಗತ್ತಲಲ್ಲಿ ನನ್ನನ್ನು ಎಳೆದುಕೊಂಡು ಮರದ ಕೆಳಗೆ ಹೋದೆ. ಮುಂದೆ ನೀನು ನನ್ನೆದುರು...........

ಪ್ರೇತ : ನೀನು ಬೇಕಿತ್ತು ನನಗೆ. ಎಳೆಯ ಹುಡುಗ ಬೇಕಿತ್ತು (ವಿಕಟನಿಗೆ) ಮುದಿ ಗಂಡನ ಬದಲು. ಆದರೆ ನೀನೇನು ಮಾಡಿದೆ?

ನವಾಬ : (ಹೆದರುತ್ತಾ) ನಿನಗೆ ತಿಳಿಯದಂತೆ ದೊಡ್ಡ ಕಲ್ಲಿನಿಂದ ನಿನ್ನ ತಲೆಗೆ ಹೊಡೆದೆ. ನೀನು ಸತ್ತೆ.

ಪ್ರೇತ : ಸತ್ತಿಲ್ಲ. ನಿನ್ನೊಳಗೆ ಇದ್ದೇನೆ.

(ಪ್ರೇತ ಕುಣಿಯುತ್ತಾ ಹೋಗುತ್ತದೆ) (ಕತ್ತಲೆ-ಬೆಳಕು)

ನವಾಬ : ಆಗ ನನ್ನ ವಯಸ್ಸಿಗೆ ಹೊಳೆದದ್ದು ಅಷ್ಟೆ. ಆ ರಕ್ತ- ಅವಳ ಒಡೆದ ತಲೆ ಮಿದುಳು. ಅವಳ ಬೆತ್ತಲೆ ದೇಹ! ವಿಕಾರವಾದ ಮುಖ. ಅವಳ ನಗ್ನ ದೇಹ ಸುಂದರವಾಗಿರಲಿಲ್ಲ. ಕುರೂಪಿಯಾಗಿತ್ತು. ಅವಳು ಕರೆದ ಕ್ರಮ ಅಸಹ್ಯವಾಗಿತ್ತು. ಅದೇ ಮುಖ. ಅದೇ ಸ್ವರ ಬೇಗಂನಲ್ಲಿಯೂ ಒಮ್ಮೊಮ್ಮೆ ಕಾಣಿಸಿಕೊಳ್ಳುತ್ತದೆ. ನನಗೂ ವಯಸ್ಸಾಗಿದೆ. ಬೇಗಂ ಕೂಡಾ ಹೀಗೆಯೇ ಮಾಡಬಹುದೆ? ಏನೋ ಗೊತ್ತಿಲ್ಲ. ಅವರವರ ಹಾದಿ ಅವರವರಿಗೆ ನಿಚ್ಚಳವಾಗಿರುತ್ತದೆ. ನನ್ನ ಮನಸ್ಸು; ದೇಹ ಸೋತಿದೆ. ಆದರೆ ಹತ್ತನೆಯ ವಯಸ್ಸಿನಲ್ಲಿ ನಾನು ನಡೆಸಿದ ಒಂದು ಕೊಲೆ ಮಾತ್ರ- ಅದು ನಗ್ನ ಹೆಂಗಸಿನ ಕೊಲೆ-ಹಾಗೆಯೇ ಅಚ್ಚೊತ್ತಿ ನಿಂತಿದೆ. ಅದನ್ನು ದಾಟಲು ಆಗಲೇ ಇಲ್ಲ.

(ನವಾಬ ತನ್ನ ತಲೆಯನ್ನು ತಾನೇ ಕೆರೆದುಕೊಳ್ಳುತ್ತಾನೆ)

ನವಾಬ : ಆ ಭಯ ನನ್ನಿಂದ ಮಾಯವಾಗುವುದಿಲ್ಲ ಗೊತ್ತು.

ಎಲ್ಲವನ್ನು ಬಿಟ್ಟು ಹೊರಡಬೇಕು.

ಯಾವುದೂ ಬೇಡ- ಕೊಳಕು ಅಧಿಕಾರ:

ವೃಥಾ ಹಲ್ಲು ಕಿರಿಯುವ ಜನ.

ಅಂತಃಪುರದಲ್ಲಿ ಸ್ವಾರ್ಥಿ ಹೆಂಗಸು!

ಅಧಿಕಾರ: ಕಾಮ:ದಾಹ:ಭೂಮಿ: ಸಂಪತ್ತು:

ಈ ಚಕ್ರಾಕಾರದಲ್ಲಿ ಸಿಕ್ಕಿದ ಮನುಷ್ಯರ ಮುಖದಲ್ಲಿ ಕೇವಲ ವಿಕಾರಗಳೇ ಕಾಣಿಸುತ್ತವೆ.

ತಂದೆ ಬದುಕಿರುವವರೆಗೆ ನನಗೆ ಭಯ ಇರಲಿಲ್ಲ. ಅವರ ತೊಡೆಯಲ್ಲಿ ಮಲಗಿ- ಅವರೆದೆಯ ರೋಮರಾಶಿಯಲ್ಲಿ ಕೈಯಾಡಿಸುತ್ತಿದ್ದೆ. ಅವರ ಕೈಬೆರಳುಗಳು ನನ್ನ ತಲೆಯ ಮೇಲೆ ಓಡಾಡುತ್ತಿದ್ದವು. ಎಷ್ಟೊಂದು ನೆಮ್ಮದಿಯಿತ್ತು? ಅಪ್ಪನಿಗೆ ನನ್ನ ಮೇಲೆ ಪ್ರೀತಿಯಿತ್ತು. ಅಪ್ಪನ ತೋರು ಬೆರಳು ಹಿಡಿದು ನಡೆಯುತ್ತಿದ್ದರೆ ಧೈರ್ಯವಿರುತ್ತಿತ್ತು. ಈಗ ಯಾವುದೂ ಇಲ್ಲ. ಸಾಯುವ ಕೆಲ ದಿನ ಮೊದಲು ಅಪ್ಪ ಯಾಕೆ ಹಾಗಂದನೊ ಗೊತ್ತಿಲ್ಲ: 'ಕಂದಾ, ನಿನಗೆ ಗೊತ್ತಿಲ್ಲ- ನೋವು ನುಂಗುವುದ ಕಲಿ. ಕರುಳು ಅದನ್ನು ಬಚ್ಚಿಟ್ಟಿರಲಿ. ಯಾವುದಕ್ಕೂ ಇರುವುದಿಲ್ಲ. ಎಲ್ಲಾ ದಾರಿಹೋಕರಿಗೂ ಅವರದೇ ಗುರಿಗಳಿವೆ. ಅವರು ನಿನ್ನನ್ನು ವಿಚಾರಿಸಲಾರರು. ಮುಂದೆ ನಿನ್ನ ಕೈ ಹಿಡಿಯುವ ಹೆಂಡತಿ ಕೂಡಾ ತೃಷೆ ಹಿಂಗಿದ ಮೇಲೆ ನಿನಗೆ ಅನ್ನವಿಟ್ಟಾಳು ಎಂದು ತಿಳಿಯಬೇಡ. ನಿನ್ನ ಆತ್ಮಕ್ಕೆ ನಿನ್ನ ದೇಹವೇ ಊರುಗೋಲು.' ಈ ಸಂಜೆ ಅದು ನೆನಪಾಗುತ್ತಿದೆ. ಸುಮ್ಮನೆ ಅಳಬೇಕೆಂದು ಅನಿಸುತ್ತಿದೆ. ಆದರೆ ಅಳುವುದು ಕಷ್ಟ. ನಗುವುದೂ ಕಷ್ಟ.

(ಗಲ್ಲಕ್ಕೆ ಕೈಯೂರಿ ಸುಮ್ಮನೆ ಕುಳಿತುಕೊಳ್ಳುತ್ತಾನೆ)

(ಸೂಫಿ ಸಂತನ ಪ್ರವೇಶ)

ಸಂತ : ಯಾರಪ್ಪಾ ನೀನು? ಬೆಳಕು- ಕತ್ತಲೆಯ ಮಧ್ಯೆ?

ನವಾಬ : ಬೆಳಕಿಂದ ಬಂದೆ. ಕತ್ತಲೆಯನ್ನು ಹುಡುಕುತ್ತಿದ್ದೇನೆ.

ಸಂತ : ಪ್ರತಿಯೊಬ್ಬರ ಹೃದಯದಲ್ಲಿಯೂ ಕತ್ತಲೆಯಿದೆ. ಬೆಳಕಿಗೆ ಹಂಬಲಿಸಬೇಕು.

ನವಾಬ : ಹಂಬಲವನ್ನು ಕಳೆದುಕೊಳ್ಳುವುದು ಹೇಗೆ?

ಸಂತ : ಹಂಬಲ ಗೆಲ್ಲಲು ಸುಲಭವಲ್ಲ. ಅದು ಕಠಿಣಮಾರ್ಗ. ಮಾಯೆ ಎನ್ನುವುದು ಜೇಡರ ಬಲೆ. ಹಂಬಲ: ಬಯಕೆಗಳು ಹಾಗೆಯೇ. ಗೆಲ್ಲುವುದು ಕಷ್ಟ. ಇಂದ್ರಿಯವನ್ನು ನಿಗ್ರಹಿಸುವುದು ಕಲ್ಲಿನಿಂದ ನೀರು ತೆಗೆಯುವುದು ಕಷ್ಟ. ಆದರೆ ಸಾಧಿಸಬೇಕು.

ನವಾಬ : ನಾನು ನನ್ನ ಜೀವನ ಪರ್ಯಂತ ತುಂಬಾ ಹುಡುಕಿದ್ದೇನೆ. ಆದರೆ ಅದು ಸಿಗಲಿಲ್ಲ.

ಸಂತ : ಸೂಜಿಬಿದ್ದಲ್ಲಿ ಹುಡುಕಬೇಕು. ಅದು ಕತ್ತಲಲ್ಲಿ ಅಲ್ಲ. ನಿಚ್ಚಳ ಬೆಳಕಿನಲ್ಲಿ.

ನವಾಬ : ನಾನೀಗ ಏನು ಮಾಡಬೇಕು?

ಸಂತ : ಸ್ವಂತ ಅನ್ನುವುದನ್ನು ಕಳೆದುಕೋ.

ನವಾಬ : ಅದು ನನ್ನಂಥವರಿಗೆ ಸಾಧ್ಯವಿಲ್ಲದ ಮಾತು.

ಸಂತ : ನಿನ್ನನ್ನು ನೀನು ಗೆಲ್ಲುವುದನ್ನು ಕಲಿ.
ಅದರಿಂದ ಎಲ್ಲವೂ ಸಾಧ್ಯವಾಗುತ್ತದೆ.

ನವಾಬ : ನನ್ನನ್ನು ನನಗೆ ಗೆಲ್ಲುವುದು ಸಾಧ್ಯವಾಗಿದ್ದರೆ ನಾನು ಹೀಗೆ ಏಕಾಂತದಲ್ಲಿ ಕುಳಿತಿರಬೇಕಾಗಿರಲಿಲ್ಲ.

ಸಂತ : ಸ್ವಂತ ವಿಶ್ವಾಸವಿಲ್ಲದವರ ಮಾತದು.

ನವಾಬ : ದೇವರು ದಯಾಳು ಅನ್ನುವುದು ಕೂಡಾ ಸುಳ್ಳು.

ಸಂತ : ಸುಳ್ಳು-ಸತ್ಯಗಳ ನಡುವೆ ಗೆರೆ ಸಣ್ಣದು.

ನವಾಬ : ದಯವಿಟ್ಟು ನನಗೆ ತೊಂದರೆ ಕೊಡಬೇಡಿ. ಹೊರಟು ಹೋಗಿ.

(ಸಂತ ಹೋಗುತ್ತಾನೆ)

ನವಾಬ : ಎಲ್ಲಿ ಹೋದರೂ ಕಾಟ ತಡೆಯಲಾಗದು.
ಆಯಾಸವಾಗಿದೆ. ಆದರೂ ಇಲ್ಲಿಯೇ ಕುಳಿತರೆ ಮತ್ತೆ ಇನ್ನೇನೊ? (ಮುಂದಕ್ಕೆ ನಡೆಯುವನು)



## ದೃಶ್ಯ 5

**(ಪುರೋಹಿತರ ಮನೆ. ಹಿಂದಿನಿಂದ 'ಉತ್ತಿಷ್ಠ ನರ ಶಾರ್ದೂಲ....' ಮಂತ್ರ ಮೆಲ್ಲನೆ ಕೇಳಿ ಬರುತ್ತದೆ.)**

**(ಪುರೋಹಿತ ಮಡಿಯುಟ್ಟುಕೊಂಡು ಹೆಗಲಿಗೆ ಶಾಲು ಹೊದ್ದುಕೊಂಡು ಬರುತ್ತಾನೆ. ಕೈಯಲ್ಲಿ ಒಂದು ಜಪದ ಮಾಲೆ. ಪುರೋಹಿತನಿಗೆ ವಯಸ್ಸಾಗಿದೆ.]**

ಪುರೋಹಿತ : ಓಂ. ನಮಃ ಶಿವಾಯ; ಓಂ. ಶಿವಾಯಃ ಓಯ್. ಹೌದೇನೆ. ಕೇಳಿಸ್ತೇನೆ– ಓಂ ಗಂ......ಗಂ.... ಗಣಪತಿಯೇ ನಮಃ. ಓಂ. ಕೇಳಿಸ್ತೇನೆ.

[ಒಳಗಿನಿಂದ ಪಾತ್ರೆಯ ಕಣಕಣ ಸದ್ದು]

ಈ ಶನಿ ಎಲ್ಲಿ ಗಂಟು ಬಿದ್ದಳೋ ಏನು ಕತೆಯೋ ದೇವರೇ ಬಲ್ಲ. ವರ್ಷಕ್ಕೊಂದು ಹೆತ್ತದ್ದೇ ಬಂತು. ಬುದ್ಧಿ ಅನ್ನುವುದು ಮಾತ್ರ ಒಂಚೂರು ಬರಲಿಲ್ಲ. ಏಯ್–ಶನಿ–ಶುಕ್ರವಾರದ ನಂತ್ರದವಳೆ, ಕೇಳಿಸ್ತೇನೆ ಗಂ–ಗಣಪತಿಯೇ ನಮಃ

ಹೆಂಡತಿ : (ಒಳಗಿನಿಂದ)– ಒಳಗೆ ಬರುವುದಕ್ಕೆ ಪುರುಸೊತ್ತಿಲ್ಲ. ಅಷ್ಟು ಹೊತ್ತಿಗೆ ಶುರುವಾಯ್ತುಪ್ಪ ಸಹಸ್ರನಾಮ ಪಾರಾಯಣ.

ಪುರೋಹಿತ : ಏಯ್ ಕತ್ತೆ–ಕರದ್ರೆ ಬರುವುದು ಬಿಟ್ಟು– ಅಲ್ಲೇನೆ ಮಾಡ್ತಿದ್ದಿಯಾ? ಗಂಡ ಅಂದ್ರೆ ತಾತ್ಸಾರ– ಈ ಹೆಂಗ್ಸರಿಗೆ. ಹೆತ್ತು–ಹೆತ್ತು ಅಭ್ಯಾಸವಾದ ಹೆಂಗ್ಸರಂತೂ ಗಂಡ್ಸರನ್ನು ಕಂಡ್ರೆ ಬೆಕ್ಕಿನ ಥರ ಮಿಯಾಂವ್, ಮಿಯಾಂವ್ ಅಂತಾವೆ. ಏನೇ ಆದ್ರೂ ಹೆಂಗ್ಸರು ಹೆರ್ಲೇ ಬಾರ್ದು. ಆಗ ಈ ಹೆಂಗ್ಸರು ಹೇಗೆ ಮಿಯಾಂವ್ ಅಂತಾರೆ? ಓಂ ನಮ

ಶಿವಾಯ. ಓಂ ನಮಃ ಶಿವಾಯ ಏಯ್ ಕತ್ತೆ-ಬಾರೇ ಇಲ್ಲಿ. ಪುರೋಹಿತರ

ಹೆಂಡತಿ : (ಜೋರಿನಿಂದ ಬರುತ್ತಾಳೆ) ಮಾತಿಗೊಮ್ಮೆ ಓಂ ನಮಃ ಶಿವಾಯ. ಮಾತು ಮಾತ್ರ ಶುದ್ಧ ಸಂಸ್ಕೃತ.

ಪುರೋಹಿತ : ಕರದ್ರೆ ಬರೋಕೆ ನಿನ್ನ ಗಂಟೇನು ಹೋಗುತ್ತೆ?

ಹೆಂಡತಿ : ಗಂಟು ಮಾಡಿ ಇಟ್ಟಿದ್ದೀರಿಲ್ಲಾ - ಮನೆ ತುಂಬಾ. ವರ್ಷಕ್ಕೊಂದೊಂದು. ಒಂದು ಕಾಲಿಗೆ ಅಂಟಿಕೊಂಡರೆ ಮತ್ತೊಂದು ಮೈಗೆ ಅಂಟಿಕೊಳ್ಳುತ್ತೆ. ಒಂದು ಅತ್ರೆ- ಮತ್ತೊಂದು ಮೂತಿ ಉದ್ದ ಮಾಡ್ಕೊಂಡು ಕೂತಿರುತ್ತೆ. (ಅವನ ಮುಖದ ಹತ್ರ ಕೈತಂದು) ನೀವು ಹೇಳಿದ ಕ್ಷಣ ನಾನು ಪ್ರದಕ್ಷಿಣೆ ಹಾಕ್ಬೇಕು. ನನ್ನ ಕಷ್ಟ ಯಾರ್ಗೆ ಹೇಳ್ಬೇಕು.

ಪುರೋಹಿತ : ಅಯ್ಯೋ ಶಿವನೆ- ಅದ್ಕೆ ಏನು ಮಾಡೋಕಾಗುತ್ತೆ? ನಾವು ಪುರೋಹಿತರು ಯಾರಾದ್ರು ಕಾಲಿಗೆ ಬಿದ್ರೆ ಹೇಳುವುದು ಏನು ಗೊತ್ತಾ? 'ದೀರ್ಘ ಸುಮಂಗಲೀ ಭವ. ಅಷ್ಟಪುತ್ರ ಪ್ರಾಪ್ತಿರಸ್ತು', ನಮ್ಗೆ ಒಂದೆರಡು ಹೆಚ್ಚಾಗಿದೆ. ಹೆಚ್ಚಾಯ್ತು ಅಂತಾ......

ಹೆಂಡತಿ : ನಿಮ್ಗೆ ಹೇಳ್ಬಾರ್ದು ನಾನು. ಹೇಳಿದ್ರೆ ಹೆಚ್ಚಾಗುತ್ತೆ. ಹೋಗಿ ಶ್ರಾದ್ಧ: ತಿಥಿ : ನಾಮಕರಣ: ಮದುವೆ ಅಂತ ಸರೀ ತುಪ್ಪ ಹೋಳಿಗೆ ತಿಂದು ಬರ್ತೀರಿ. ಅದು ಹೆಚ್ಚಾಯ್ತು ಅಷ್ಟೆ!

ಪುರೋಹಿತ : ಏಯ್. ಶನಿ. ದರಿದ್ರದವಳೆ, ಅದ್ಯಾರು ನಿನ್ನ ನಾಲಿಗೆಗೆ ಮೊದಲು ಜೇನು ತುಪ್ಪ ಸವರಿದ ಆ ದೇವರೇ ಬಲ್ಲ. ಅದೆಂಥಾ ಬಾಯಿಯೇ ನಿನ್ನದು? ಬಾಯ್ಮುಚ್ಚಿ ಸುಮ್ಮನಿರು ಒಮ್ಮೆ. ವಟವಟ ಅನ್ಬೇಡ. ಬೆಳಿಗ್ಗೆ ವಟವಟ ಅಂದ್ರೆ ಅದರಷ್ಟು ಹಾಳು ಇನ್ನೊಂದಿಲ್ಲ.

ಹೆಂಡತಿ : ಹೌದು. ನಾನು ವಟವಟ ಅಂತೀನಿ.

ಪುರೋಹಿತ : (ಕಿವಿಮುಟ್ಟಿ) ಓಂ ನಮಃ ಶಿವಾಯ

ಓಂ ನಮಃ ಶಿವಾಯ

ಓಂ ಗಣಪತಿಯೇ ನಮಃ

ಓಂ ನಮೋಸ್ತುತೇ ವಾಸುದೇವಯಾ

ಹೌದೇನೆ-ಪೂಜೆಗೆ ತಯಾರು ಮಾಡಿದಿಯಾ?

ಹೆಂಡತಿ : ಅದು ಬೇರೆ, ನಾನೇ ಮಾಡ್ಬೇಕು.

ಪುರೋಹಿತ : ಮತ್ತಿನ್ಯಾರು? ಸತ್ತ ನನ್ನ ಅಜ್ಜಿ ಬಂದು ಮಡಿಯಲ್ಲಿ ನೈವೇದ್ಯಕ್ಕೆ ಬೇಯಿಸ್ತಾಳಾ? ಓಂ–

ಹೆಂಡತಿ : ಸತ್ತ ನಿಮ್ಮಜ್ಜಿ ಬಂದ್ರೆ ಮಾಡಿಸ್ಕೊಳ್ಳಿ. ನಿಮ್ಗಂತೂ ಎಲ್ಲಾ ಕಾಲ ಬುಡಕ್ಕೆ ತಯಾರು ಮಾಡಿಕೊಡಬೇಕು. ಈಗ್ಲೇ ನಾನು ಹಣ್ಣುಗಾಯಿ ನೀರ್ಗಾಯಿ ಆಗಿದ್ದೇನೆ. ನಿಮ್ಗೆ ಬೆಳಿಗ್ಗೆದ್ದು ಪೂಜೆ ಮುಗ್ಸಿ ಹೊರಟ್ರೆ ಮುಗಿಯಿತು– ಮತ್ತೆ ನಿಮ್ಮ ಸವಾರಿ ಬರುವುದು ರಾತ್ರಿ ಮಕ್ಕಳು... (ಅಳುವುದಕ್ಕೆ ತೊಡಗುವಳು)

ಪುರೋಹಿತ : (ಚಿಟಿಕೆ ನಶ್ಯ ಮೂಗಿಗೇರಿಸಿಕೊಂಡು ಕುಳಿತುಕೊಳ್ಳುವನು)

ಒಂದೋ ಡಬ್ಬಕ್ಕೆ ಹೊಡೆದ ಹಾಗೆ ಮಾತು, ತಪ್ಪಿದರೆ ಮೂಗು, ಬಾಯಿ ಕಣ್ಣಲ್ಲಿ ಒರತೆ. ಜಾತಕ ಎಲ್ಲಾ ಸರಿಯಿತ್ತು. ಹೊಂದಾಣಿಕೆ ಸರಿ ಬರುತ್ತೆ ಅಂತಲೂ ಇತ್ತು. ಈಗ ನೋಡಿದ್ರೆ–ಶಾಪ–ಇದು ಶಾಪ. (ಜೋರಾಗಿ ಆಕಳಿಸುತ್ತಾನೆ) ಈ ಕರಿ ಮುಸುಡಿ ಕಪ್ಪೆಯನ್ನು ಯಾಕಾದ್ರೂ ಮದುವೆಯಾದೆನೋ ಅಂತ ಅನ್ಸುತ್ತೆ. ಸುಖವೂ ಇಲ್ಲ. ಮಣ್ಣೂ ಇಲ್ಲ. ನಾನು ಏನು ಬೇಕು ಅಂತ ಮಕ್ಕಳು ಮಾಡಿದ್ದಾ? ಸತ್ತು ಸ್ವರ್ಗದಲ್ಲಿರುವ ತಂದೆ ತಾಯಿಗಳಿಗೆ ಪಿಂಡ ನಾನು ಕೊಡ್ಬಹುದು. ನನ್ಗೆ ಪಿಂಡ ಕೊಡೋಕೆಬೇಕಲ್ಲಾ? ಒಟ್ಟು ಸುಖಾ ಇಲ್ಲ. ಹೇಳಿ ಪ್ರಯೋಜ್ನ ಇಲ್ಲ (ಹೆಗಲಿನ ಶಲ್ಯವನ್ನು ತೆಗೆದು ಅದರಲ್ಲಿ ಗಾಳಿ ಬೀಸುತ್ತಾ) ಈ ಹೆಂಗ್ಸಿಗೆ ಒಂದೇ ರಾಗ– ಒಂದೇ ತಾಳ.

ಹೆಂಡತಿ : (ಕಣ್ಣೀರು ಒರೆಸಿಕೊಳ್ಳುತ್ತಾ) ಹೌದು, ಹೌದು, ಒಂದೇ ರಾಗ– ಒಂದೇ ತಾಳ ನಿಮ್ಮ ಕತೆ ಗೊತ್ತಿಲ್ಲ ಅಂತ ತಿಳ್ಕೊಬೇಡಿ.

ಪುರೋಹಿತ : ಬಾಯ್ಮುಚ್ಚು –ಬೆಳಗಿನ ಅಪಶಕುನದ ಹಲ್ಲಿ.

ಹೆಂಡತಿ : ಬಾಯ್ಮುಚ್ಚಿ ಕುಳಿತುಕೊಳ್ಳುತ್ತೇನೆ–ದೊಡ್ಡಘನಂದಾರಿ ಪುರೋಹಿತರು. ಶ್ರಾದ್ಧಕ್ಕೆ ಹೋದರೆ – ಅದರ ದಕ್ಷಿಣೆ ಎಲ್ಲಿ ಹೋಗ್ತದೆ ಅಂತ ಗೊತ್ತು.

ಪುರೋಹಿತ : ಸುಮ್ನೆ ತಲೆಹರಟೆ ಮಾಡ್ಬೇಡ.

ಹೆಂಡತಿ : ವಯಸ್ಸಿಗೆ ಬಂದ ಮಗಳು ಮನೆಯಲ್ಲಿದ್ದಾಳೆ. ಅವಳಿಗೆ ಮದುವೆ ಮಾಡುವುದು ಬೇಡ. ಮೂರು ಹೊತ್ತು ಊಟ ಸಿಕ್ಕಿದ್ರೆ ಆಯ್ತು.

ಪುರೋಹಿತ : ನಾನೇನು ಮಾಡ್ಲಿ? ಮಗಳನ್ನು ಹೆತ್ತದ್ದು ನಿನ್ನ ಕರ್ಮ.

ಹೆಂಡತಿ : ಹೌದು– ನನ್ನ ಕರ್ಮ. ನಿಮ್ದೇನು ಇಲ್ವಾ?

ಪುರೋಹಿತ : ನಂದೇನು?

ಹೆಂಡತಿ : ಈ ವಯಸ್ಸಿಗೂ ರಾತ್ರಿ ಶಾಲು ಹೊದ್ದುಕೊಂಡು ಆ........

ಪುರೋಹಿತ : ಆ ವಿಷಯ ನಿನಗೆ ಬೇಡ. ಹೋಗುವಾಗ ಜನಿವಾರ ತೆಗೆದಿಟ್ಟೇ ಹೋಗ್ತೇನೆ ಬರುವಾಗ ಸ್ನಾನ ಮಾಡಿ ಬರ್ತೇನೆ.

ಹೆಂಡತಿ : ಇಟ್ಟುಕೊಂಡವಳು ಬೇಕು. ಆದ್ರೆ ಮಗಳ ಮದ್ವೆ ವಿಷಯಬೇಡ.

ಪುರೋಹಿತ : ನನಗೀಗ ಪುರುಸೊತ್ತಿಲ್ಲ. ಮಗಳಿಗೆ ಮದ್ವೆ ಮಾಡಿದ್ರಾಯ್ತು.

ಹೆಂಡತಿ : ಅವಳು ದೊಡ್ಡವಳಾಗಿದ್ದಾಳೆ.

ಪುರೋಹಿತ : ಅಯ್ಯೋ, ಅಲ್ಲ ಎಂದವರಾರು? ಹುಡುಗಿಯರು ಬೇಗ ದೊಡ್ಡರಾಗುತ್ತಾರೆ. ಅವರನ್ನು ದೊಡ್ಡವರಾಗ್ಬೇಡಿ ಅಂತ ಮಿಡಿ ಉಪ್ಪಿನ ಕಾಯಿ ಹಾಕಿದಂತೆ ಬಾಯಿ ಮುಚ್ಚಿ ಇಡೋಕಾಗುತ್ತಾ? ಮಗಳು ದೊಡ್ಡವಳಾದಳು–ಇನ್ನೂ ದೊಡ್ಡವಳಾಗುತ್ತಾಳೆ. ಅದರಲ್ಲಿ ಏನಾಯ್ತು ಅಂತ? ಓಂ ನಮಃ ಶಿವಾಯಃ ನಾನು ಪೂಜೆ ಮಾಡಿ ಹೊರಡಬೇಕು.

ಹೆಂಡತಿ : ಮಕ್ಕಳನ್ನು ಮಾಡಿದ್ರಾಯ್ತು. ಚಿಂತೆ ಜವಾಬ್ದಾರಿಯೇ ಇಲ್ಲ ನಿಮ್ಗೆ.

ಪುರೋಹಿತ : ಹೆಂಡ್ತಿ–ಮಕ್ಳನ್ನು ಹೊತ್ಕೊಂಡು ಮರೆವಣಿಗೆ ಹೋಗ್ಬೇಕಾ? ಯಾರ್‍ಯಾರು ಎಲ್ಲೆಲ್ಲಿ ಇರ್ಬೇಕೋ ಅಲ್ಲಿದ್ದರೆ ಚೆಂದ.

ಹೆಂಡತಿ : ತಪ್ಪಿಸಿಕೊಳ್ಳುವುದು ಬೇಡಾ! ಮಗ್ಳ ಮದ್ವೆ ವಿಷಯ ಏನು ಮಾಡ್ತೀರಿ ಹೇಳಿ? ಮೈನೆರೆಯುವ ಮೊದಲೇ ಮದುವೆ ಮಾಡ್ಬೇಕಿತ್ತು. ಈಗ್ಲೂ ನೀವು ಗೊರಕೆ ಹೊಡೆಯುವುದು ಬಿಟ್ಟಿಲ್ಲ.

ಪುರೋಹಿತ : ಮೈನೆರೆದರೆ ಏನು? ಪ್ರತಿ ತಿಂಗಳ ಮುಟ್ಟು ಕೂಡಾ ತಂದೆಯಾದವನು ನರಕ್ಕೆ ಹೋಗ್ತಾನೆ ಅಂತ ಶಾಸ್ತ್ರ ಹೇಳುವುದು ನಿಜ. ನಿನಗಿಂತ ದೊಡ್ಡ ನರಕ ಯಾವುದು? ಶಾಸ್ತ್ರಕ್ಕೆ–ಪ್ರತಿಶಾಸ್ತ್ರ ನನ್ನತ್ರ ಇದೆ. ಪ್ರಾಯಶ್ಚಿತ್ತ ಮಾಡಿಕೊಂಡರೆ ಆಯ್ತು.

ಹೆಂಡತಿ : ಜಾತಿಯವರು ಬಹಿಷ್ಕಾರ ಹಾಕ್ತಾರೆ ಅಷ್ಟೆ! ನಿಮ್ಮ ಮಂತ್ರ–ತಂತ್ರ ನಿಂತು ಹೋಗ್ತದೆ.

ಪುರೋಹಿತ : ಓಂ-ಶಿವಾಯಃ-ನನ್ನ ಗಣಪತಿ ಕೈ ಬಿಡುವುದಿಲ್ಲ ಗೊತ್ತಾಯ್ತಾ. ಈ ಜನಿವಾರವನ್ನು ಎಷ್ಟೊಂದು ಸಲ ಬದಲಿಸಿದ್ದೇನೆ? ಜನಿವಾರ ತುಂಡಾದಾಗ ಕಟ್ಟಿ ಗಣಹೋಮ ಮಾಡಿದ್ದೇನೆ. ಯಾರಿಗೆ ಏನಾದ್ರೂ ಗೊತ್ತಾಯ್ತಾ? ಹೋಗೆ-ಒಳಗೆ. ಹೆಂಗಸರು ಒಳಗಿನ ವ್ಯವಹಾರ ಬಿಟ್ಟು ಹೊಸ್ತಿಲು ದಾಟಿದ್ರೊ ವ್ಯವಹಾರ ಕೆಟ್ಟೋಯ್ತು ಅಂತ ಅರ್ಥ. ದೇವರ ಪೂಜೆಗೆ ನೋಡೆ ಶನಿ. (ಮತ್ತೆ ಆಕಳಿಸುತ್ತಾ) ಓಂ ಗಂ ಗಣಪತಿಯೇ ನಮಃ

ಹೆಂಡತಿ : ನಿಮ್ಮ ಕರ್ಮ - ನಿಮ್ಗೇ ಸುತ್ಕೊಳ್ಳುತ್ತದೆ ಅಷ್ಟೆ. (ದರಬರನೇ ಒಳಗೆ ನಡೆಯುತ್ತಾಳೆ)

ಪುರೋಹಿತ : ಸಾವಿರ ಸುಳ್ಳು ಹೇಳಿ ಮದ್ವೆ ಮಾಡಿದವನಿಗೆ ನನ್ನ ಮಗಳಿಗೆ ಮದುವೆ ಮಾಡುವುದು ಕಷ್ಟವಾ? ನೋಡಿ ಬಿಡ್ತೇನೆ?

**(ಒಳಗೆ ನಡೆಯುತ್ತಾನೆ**
**'ಪುರೋಹಿತರೆ, ಪುರೋಹಿತರೆ' ಕರೆಯುವುದು ಕೇಳಿಸುತ್ತದೆ.)**

ಹೆಂಡತಿ : (ಒಳಗಿಂದ) (ಸೆರಗಿನಲ್ಲಿ ಕೈ ಒರಸುತ್ತಾ) ಮಗಳ ಮದುವೆ ಮಾಡಿಸಲು ಪುರಸೋತ್ತು ಇಲ್ಲದೆ ಪುರೋಹಿತರನ್ನು ಕರೆಯಲು ಬಂದರು ಶ್ರಾದ್ಧ ಮಾಡಿಸಲು. ಯಾರಿಗೋ ಪಿಂಡ ಬಿಡಿಸಲು. ಸತ್ತವರಿಗೆ ಸ್ವರ್ಗ ಕಾಣಿಸಿ ಅಂತ ಹೇಳಲು. ಈ ಪುರೋಹಿತರು ಯಾವ ಮಂತ್ರ ಹೇಳ್ತಾರೋ ಏನೋ? ಮನೆಯಲ್ಲಿ ನೋಡಿದ್ರೆ ದರಿದ್ರವಳೇ, ಕತ್ತೆ, ಶನಿ, ಇದು ಬಿಟ್ರೆ ಬೇರೆ ಮಂತ್ರ ಅಂತೂ ಇಲ್ಲ. ಯಾವಾಗ್ಲೂ ಏಯ್ ಕತ್ತೆ ಅಂತಲೇ ಕರೆಯೋದು. ಕತ್ತೆಯಂತೆ, ದರಿದ್ರ ಅಂತೆ, ಶನಿಯಂತೆ. ಯಾರದು? ಬನ್ನಿ ಒಳಗೆ.

ಋಗ್ವೇದಿ : (ಒಳಗೆ ಅಡಿಯಿಡುತ್ತಾ) ನಮಸ್ಕಾರಮ್ಮ, ಕತ್ತೆ;ದರಿದ್ರ;ಶನಿ ಅಂತ ಬೈದದ್ದು ಕೇಳಿಸಿತು.

ಶ್ರೋತ್ರಿ : ನಾವೂ ಮೂವರು ಇದ್ದೇವೆ.

ಹೆಂಡತಿ : ಅಯ್ಯೊಯ್ಯೋ, ನಿಮಗೆಲ್ಲಿ ಹೇಳಿದೆ. ಯಾರಿಗೋ ಹೇಳಿದೆನಪ್ಪ. ಬೆಳಗಿನ ಹೊತ್ತು ಬಂದವರು-ಕುಳಿತುಕೊಳ್ಳಿ. ನಮ್ಮವರು ಪೂಜೆಗೆ ಕುಳಿತುಕೊಂಡಿದ್ದಾರೆ. ಇನ್ನೇನು ಬಂದು ಬಿಡ್ತಾರೆ.

(ಒಳಗಿನಿಂದ ದೊಡ್ಡದಾಗಿ)
ವಿಷ್ಣು ಪತ್ನಿ ನಮಸ್ತುಭ್ಯಂ ವರದೇ ಕಾಮರೂಪಿಣಿ
(ಮತ್ತೆ ಸಣ್ಣ ಸ್ವರದಿಂದ)
ಓಂಕಾರ ಪಟ್. ಹ್ರೂಂ ಕಾರ ಪಟ್
ಸ್ವಾಹಾ. ಹೌದೇನೆ? ಕೇಳಿಸ್ತೇನೆ-ಏಯ್ ಕತ್ತೆ
ಈ ಹೆಂಗಸರಿಗೆ ಬುದ್ಧಿಯಿಲ್ಲ-ಸ್ವಾಹಾ
ಈ ಹೆಂಗಸರಿಗೆ ಬುದ್ಧಿ ಸಮಯಿಲ್ಲ ಸ್ವಾಹಾ
ಓಂಕಾರ ಪಟೆ ಹ್ರೂಂಕಾರ ಪಡ್
ಗಂ ಗಣಪತಯೇ ಸ್ವಾಹಾ
ದರಿದ್ರವಳೇ-ಯಾರು ಬಂದಿದ್ದು? ಅವರಿಗೆ ಕುಡಿಯೋಕೆ ಕೊಡು ಪಟ್ಟಂತ ಪೂಜೆ ಮುಗಿಸಿ. ಲಟ್ಟಂತ ಬರ್ತೇನಿ.

ಋಗ್ವೇದಿ : ನಿಧಾನ ಬನ್ನಿ ಪುರೋಹಿತರೆ. ಅವಸರವಿಲ್ಲ. ನಾವು - ಋಗ್ವೇದಿ: ಶ್ರೋತ್ರಿ: ಜೋಯಿಸರು ಬಂದಿದ್ದೀವಿ ಅಷ್ಟೆ. ಅವಸರವಿಲ್ಲ. ನಿಧಾನ. ನಿಧಾನ.

ಶ್ರೋತ್ರಿ : ನಿಧಾನ-ನಿಧಾನ

ಜೋಯಿಸ : ನಾನು ಏನು ಹೇಳ್ತೀನಪ್ಪಾ ಅಂದ್ರೆ-ನಿಧಾನವಾಗಿ ಮುಗೀಲಿ ನಿಂ ಪೂಜೆ. ಅವಸರವಿಲ್ಲ. ನಾನು ಏನು ಹೇಳ್ತೀನಪ್ಪಾ ಅಂದ್ರೆ......

ಋಗ್ವೇದಿ : (ಋಗ್ವೇದಿ) ಜೋಯಿಸರೆ. ಸುಮ್ಮನಿರಿ. ಬಾಯಿ ಬಿಟ್ಟರೆ ಬಣ್ಣಗೇಡು.

ಪುರೋಹಿತರ ಹೆಂಡತಿ: ಕುಳಿತುಕೊಳ್ಳಿ. ಆಸರಿಕೆ ತರ್ತೀನಿ.

ಋಗ್ವೇದಿ : ಆಗಲೇ ಹೇಳಿದಿರಲ್ಲಾ. ಆದ್ರೆ-ಮಾತಿಗೆ ನಿಂತ್ರೆ-ಕುಳಿತ್ಕೋಳ್ಳೋದು ಮರ್ತು ಹೋಗುತ್ತೆ. ಕೂತ್ಕೊಂಡ್ರೆ-ಎದ್ದು ನಿಲ್ಲೋದು ಮರ್ತು ಹೋಗುತ್ತೆ. ನಂಗೆ ಶ್ರೋತ್ರಿಗೆ ಮರೆವು ತಾಯಿ. ವಯಸ್ಸಾಯ್ತು.

ಜೋಯಿಸ : ಏನಪ್ಪಾ ಅಂದ್ರೆ- ನಂಗೆ ನಿಜವಾಗಿಯೂ ಇವರಷ್ಟು ವಯಸ್ಸಾಗಿಲ್ಲ. ಏನಪ್ಪಾ ಅಂದ್ರೆ-ವಯಸ್ಸಾದ ಹಾಂಗೆ ಕಾಣಿಸುತ್ತೆ. ಬಗ್ಗಿ ಕೂತು ಕೂತು- ಪಂಚಾಂಗ ನೋಡಿ-ನೋಡಿ ಹೀಂಗಾತು ಅಷ್ಟೆ -ಹ್ಹಿ ಹ್ಹಿ ಹ್ಹಿ
(ಅಷ್ಟರಲ್ಲಿ ಪುರೋಹಿತ ಒಳಗಿನಿಂದ ಹೊರಗೆ ಬರುತ್ತಾರೆ)

ಪುರೋಹಿತ : ಎಲ್ಲರಿಗೂ ನಮಸ್ಕಾರ (ಹೆಂಡತಿಯ ಕಡೆ ಮುಖ ತಿರುಗಿ) ನೀನು ಇನ್ನೂ ಇಲ್ಲೇ ನಿಂತಿದ್ದೀಯಲ್ಲ ಬೇತಾಳದ ಹಾಂಗೆ. ಒಳಗೆ ಹೋಗೆ. ಯಾರು ಬಂದ್ರೆ ಹೇಗೆ ಇರಬೇಕು ಅಂತ ಗೊತ್ತಿಲ್ಲ.

ಹೆಂಡತಿ : ಹುಂ. ಇನ್ನು ಎಲ್ಲಾ ನಿಮ್ಮಿಂದ ಕಲ್ತು ಆಗಬೇಕು ಅಷ್ಟೆ.

ಪುರೋಹಿತ : ಹಂದಿ ಮರಿ ಹಾಕಿದ್ದಂಗೆ ಹಾಕಿದಿ. ಆದ್ರೂ ನಯ ನಾಜೂಕುಕಲ್ಲಿಲ್ಲ. (ನಶ್ಯ ಮುಗಿಗೆ ಏರಿಸುತ್ತ) ಹೋಗೆ, ಹೋಗೆ ಒಳಗೆ

ಪುರೋಹಿತರ ಹೆಂಡತಿ: ಹೋಗದೆ ಏನು ಜಗಲಿಯಲ್ಲಿ ಕುಳಿತರೆ ಅಡುಗೆ ನೀವು ಮಾಡ್ತೀರಾ?

(ಋಗ್ವೇದಿಗಳ ಕಡೆಗೆ ನೋಡಿ) ನೋಡಿ ಅಣ್ಣ ಮದ್ವೆ ಆದ ದಿನದಿಂದ ಇಲ್ಲಿಯವರೆಗೆ ಒಂದು ಒಳ್ಳೆ ಮಾತು ನಾನು ಇವ್ರ ಬಾಯಿಂದ ಕೇಳಿದ್ದಿದ್ರೆ ಪುಣ್ಯನಾದ್ರು ಸಿಕ್ತಿತ್ತು. ಯಾವಾಗ ನೋಡಿದ್ರು....

ಪುರೋಹಿತ : ಇವ್ಳು ಯಾವ ಗಳಿಗೆಯಲ್ಲಿ ಹೊಸ್ತಿಲು ಮೆಟ್ಟಿದ್ದೋ ದೇವ್ರೇ ಬಲ್ಲ. ಈ ಕರಿಮುಸುಡಿಯನ್ನ ಕಟ್ಕೊಂಡು ಮನೆಯ ಕಂಬಕ್ಕೂ ಕೂಡ ನೆಮ್ಮದಿ ಹಾಳಾಗಿ ಹೋಗಿದೆ.

ಋಗ್ವೇದಿ : ನೀವೂ ಹೋಗಿಯಮ್ಮ ಒಳಗೆ.

ಶ್ರೋತ್ರಿ : ಎಲ್ಲರ ಮನೆಯಲ್ಲೂ ಇದು ಇದ್ದದ್ದೇ.

ಜೋಯಿಸ : (ಶಲ್ಯದಿಂದ ಮೂಗೊರೆಸಿಕೊಳ್ಳುತ್ತ) ನಾನೂ ಏನ್ ಹೇಳ್ತೀನಪ್ಪ ಅಂದ್ರೆ– ಏನೋ ಹೇಳೋಕ್ಕೆ ಹೊರಟೆ (ಮತ್ತೆ ಅದೇ ಶಲ್ಯದಿಂದ ಕಿವಿಯೊಳಗೆ ತುರಿಸುತ್ತ) ಎಲ್ಲರ ಮನೇಲೂ ದೋಸೆ ತೂತೆ. ಗಂಡ ಹೆಂಡತಿ ಜಗಳ ಆಡಿದ್ರೂ ಉಂಡು ಮಲಗಿದ ಮೇಲೆ....

ಋಗ್ವೇದಿ : ಈ ಗಾದೆ ಹಳೇದು ಜೋಯಿಸ್ರೇ.

ಜೋಯಿಸ : ಏನಪ್ಪ ಅಂದ್ರೆ ಗಾದೆ ಹಳೇದು ನಿಜ. ಆದ್ರೆ ಮದ್ವೆ ಆದ್ಮೇಲೆ ಮಕ್ಕಳಾಗಿಲ್ಲ ಅಂದ್ರೆ ಪಿಂಡ ಪ್ರಧಾನ ಮಾಡಕ್ಕೆ ಯಾರಾದ್ರೂ ಬೇಕಲ್ಲ. ಸ್ವರ್ಗದಲ್ಲಿರುವ ಪಿತೃ–ಪಿತಾಮಹರು ತಲೆಕೆಳಗೆ ಮಾಡಿಕೊಂಡು ವರ್ಷಕ್ಕೊಮ್ಮೆ ತಿಲೋದಕಕ್ಕೆ ಕಾಯ್ತಾ

ಇರ್‍ತಾರೆ. ಎರಡು ಜನ ಬ್ರಾಹ್ಮಣ ರಿಗೆ ಊಟ ಹಾಕಿದ್ರೆ ಸ್ವರ್ಗದಲ್ಲಿ ಇರೋರು ಸಂತೃಪ್ತಿ ಹೊಂದುತ್ತಾರೆ.

ಶ್ರೋತ್ರಿ : ಅದಕ್ಕೆ ಅಲ್ವಾ ಮತ್ತೆ. ಶ್ರಾದ್ಧದ ದಿನ ಈ ಪಿಂಡವನ್ನು ತಗೊಂಡು ಹೋಗಕ್ಕೆ ಕಾಗೆಗಳು ಅಂಗಳನಲ್ಲಿ ಕಾಯೋದು.

(ಒಳಗೆ ಹೋಗಿದ್ದ ಪುರೋಹಿತನ ಹೆಂಡತಿ ಪಟ್ಟನೆ ಹೊರಗೆ ಬಂದು)

ಹೆಂಡತಿ : ಕಾಗೆಯ ಮುಸುಡೂ ಕಪ್ಪು ಗೊತ್ತಾ? (ತೆರಳುವಳು)

ಪುರೋಹಿತ : ಹೋಗ್ಲಿ ಬಿಡಿ. ಇಷ್ಟು ದೂರ.... ತಾವೂ... ಬಂದ.....

ಋಗ್ವೇದಿ : ನಾವು ಬಂದ ಉದ್ದೇಶವನ್ನು ಹೇಳಿದ್ರೆ ಪುರೋಹಿತರು ಅಪಾರ್ಥ ಮಾಡಿಕೊಳ್ಳಬಾರದು.

ಪುರೋಹಿತ : ನಮ್ಮ ಜಾತಿ-ಕುಲಸ್ಥರೇನು ಇಡಿಯ ಮಠವೇ ನಿಮ್ಮ ಮಾತನ್ನು ತೆಗೆದು ಹಾಕುವುದಿಲ್ಲ. ನಾನು ತೆಗೆದು ಹಾಕುವುದೇನು ಬಂತು.

ಶ್ರೋತ್ರಿ : ನಾವು ದಾನ ಕೇಳುವುದಕ್ಕೆ ಬಂದಿದ್ದೇವೆ.

ಪುರೋಹಿತ : (ಆಶ್ಚರ್ಯಚಕಿತನಾಗಿ) ದಾನವೆ? ದಾನ ಕೊಡೋಕೆ ನನ್ನತ್ರ ಏನಿದೆ? ದಕ್ಷಿಣೆ ಬ್ರಾಹ್ಮಣ ನಾನು. ಎರಡು ಮಂತ್ರಕ್ಕೆ ನಾಕು ಕಾಸು ಸಂಪಾದಿಸುವವನು.

ಜೋಯಿಸ : ಆಕ್ಷೀ (ಮೂಗೊರಸಿಕೊಳ್ಳುತ್ತಾನೆ) ೯! ೯! ಈ ಶೀತ ಬೇರೆ ಕೇಡು.

ಶ್ರೋತ್ರಿ : ನಾವು ಬಂದದ್ದು ದೊಡ್ಡ ದಾನ ಕೇಳುವುದಕ್ಕೆ ಅಲ್ಲ. ನಿಮ್ಮಲ್ಲಿ ಒಂದು ಹೆಣ್ಣು ಕರು ಇದೆ ಅಂತ ಕೇಳಿದೆವು. ಅದನ್ನು ದಾನ ಕೊಡ್ತೀರಿ ಅಂತಾದ್ರೆ-ಜೋಯಿಸರಿಗೆ ಬೇಕಂತೆ.

(ಒಳಗಿನಿಂದ ಪುರೋಹಿತರ ಹೆಂಡತಿ ಕುಡಿಯಲು ತರುತ್ತಾಳೆ)

ಹೆಂಡತಿ : ಹ್ದೂಂ ಇದೆ. ಇದೆ. ಅದನ್ನು ಕಟ್ಟಿ ಹಾಕಿ ಮೇವು ಕೊಡುವ ಹಾಗಿಲ್ಲ. ಬಿಟ್ರೆ ಪಕ್ಕದ ಜಮೀನು ಉಳಿಯುವ ಹಾಂಗಿಲ್ಲ.

ಜೋಯಿಸ : ನೀವು ನನ್ನ ಅತ್ತೆ ಸಮಾನರು. ಅದು ಎಂದಾ ಕರುವೇ ಆಗಿರಲಿ-ಅದಕ್ಕೆ ಮೂಗುದಾರ ಹಿಡಿದುಕೊಳ್ಳುವುದು ನನಗೆ ಚೆನ್ನಾಗಿ ಗೊತ್ತು.

ಋಗ್ವೇದಿ : ನೀವು ಸುಮ್ಮನಿರಿ ಜೋಯಿಸರೆ.

ಪುರೋಹಿತ : (ಹೆಂಡತಿಗೆ) ನೀನು ಅಡ್ಡಬಾಯಿ ಹಾಕ್ಬೇಡ. ಒಳಗೆ ನೋಡು-

ನಿನ್ನ ಮಗು ಕುಂಡೆ ಹರ್‍ಕೊಂಡು ಅಳ್ತಾ ಇದೆ. ನೋಡು, (ಹೆಂಡತಿ–ಪುರೋಹಿತರನ್ನು ದುರುದುರು ನೋಡಿ ಒಳಗೆ ಹೋಗುತ್ತಾಳೆ)

ಶ್ರೋತ್ರಿ : ನಾವು ಕೇಳಿದ್ದು ಅದನ್ನಲ್ಲ.

ಪುರೋಹಿತ : ಮತ್ತೆ?

ಋಗ್ವೇದಿ : ನಿಮಗೆ ವಯಸ್ಸಿಗೆ ಬಂದ ಮಗಳಿದ್ದಾಳೆ ಅಂತ ತಿಳಿಯಿತು. ಕನ್ಯಾದಾನ ಮಾಡಿ ಕನ್ಯಾಸೆರೆ ಬಿಡಿಸ್ಕೊಳ್ಳಿ ಅಂತ ಕೇಳಿಕೊಳ್ಳುವುದಕ್ಕೆ ಬಂದೆವು.

ಪುರೋಹಿತ : ಗೊತ್ತಿತ್ತು. ಇಂಥಾ ದಿನ ಬರುತ್ತೆ ಅಂತ: ಗಣಪತಿ ದೇವರು ಕೈ ಬಿಡುವುದಿಲ್ಲ. ಅಂದ ಹಾಗೆ ವರ ಎಲ್ಲಿಯವನೊ?

ಶ್ರೋತ್ರಿ : ಪುರೋಹಿತರೇ, ವರನ ಬಗ್ಗೆ ನಿಮಗ್ಯಾಕೆ ಚಿಂತೆ? ವರನಿಗೆ ಸ್ವಲ್ಪ ವಯಸ್ಸಾಗಿದೆ ಅನ್ನುವುದು ಬಿಟ್ರೆ.

ಋಗ್ವೇದಿ : ನಿಜವಾಗಿಯೂ ನಿಮ್ಮ ಮಗಳ ಮುಖವನ್ನು ಎಳನೀರಲ್ಲಿ ತೊಳಸಿಯಾರು.

(ಜೋಯಿಸರು ಹೆಗಲಿನ ಶಾಲಿನಿಂದ ಮುಖವನ್ನು ಒರೆಸಿಕೊಂಡು ಕಂಕುಳನ್ನು ಒರೆಸುತ್ತಾ, ಮತ್ತೊಮ್ಮೆ ಚಡಪಡಿಸುತ್ತಾ ಒಳಗೆ ನೋಡುತ್ತಾ ಕೂರುತ್ತಾನೆ)

ಪುರೋಹಿತ : ಆದರೂ ವರ ಯಾರು? ಏನು? ಎತ್ತ? ಗೊತ್ತಾಗಬೇಕಲ್ಲ?

ಋಗ್ವೇದಿ : ನಮ್ಮ ಜೋಯಿಸರಿಗೆ ಮೊದಲ ಹೆಂಡತಿ ಸರಿಯಿಲ್ಲ. ಅವಳಿಗೆ ಕಾಯಿಲೆ. ಹೆಂಡತಿ ಕಾಯಿಲೆ ಇರುವಾಗ ಎರಡನೆಯ ಮದುವೆ ನಿಷಿದ್ಧವಲ್ಲ. ಅದಕ್ಕೆ ಕೇಳೋಣ ಅಂತ ಬಂದೆವು.

ಜೋಯಿಸ : ಹ್ಹೆ ಹ್ಹೆ–ನನಗೇನಾಗಿದೆ?

ಪುರೋಹಿತ : (ಸ್ವಲ್ಪ ಸಿಟ್ಟಿನಿಂದ) ನಾಲ್ಕು ಬಿದಿರು, ಒಂದು ಮಡಿಕೆ, ಹಲಸಿನ ಮರದ ಸೌದೆ ತಯಾರು ಮಾಡಿಕೊಳ್ಳುವ ವಯಸ್ಸು ನಿಮ್ಮದು.

ಜೋಯಿಸ : (ತಟ್ಟನೆ ಎದ್ದು ನಿಂತು) ಏನು ಹೇಳಿದಿರಿ? (ಸಿಟ್ಟಿನಿಂದ) ಏನಪ್ಪಾ ಅಂದ್ರೆ.. (ಶಾಲು ಕೊಡವಿ) ಏನಪ್ಪಾ ಅಂದ್ರೆ... (ತಿರುಗಿ) ಏನಪ್ಪಾ ಅಂದ್ರೆ (ಶಾಲಿನಿಂದ ತಲೆಗೆ ರುಮಾಲು ಕಟ್ಟಿ ಜೋರಾಗಿ) ಏನಪ್ಪಾ ಅಂದ್ರೆ....... ವಯಸ್ಸಂತೆ ವಯಸ್ಸು, ಏನು ಮಹಾ ವಯಸ್ಸಾಗಿರುವುದು ನನ್ಗೆ. ನಾನು ಮನಸ್ಸು ಮಾಡಿದ್ರೆ ಈಗ

ಈಗ (ಕೈ ಚಿಟಿಕೆ ಹೊಡ್ದು) ಸಾಲುಗಟ್ಟಿ ಕನ್ಯಾದಾನ ಮಾಡೋರು ಎಷ್ಟು ಬ್ರಾಹ್ಮಣರು ಬೇಕು ಹೇಳು? ಒಂದೇ ಸಲಕ್ಕೆ ಹತ್ತು ಮದುವೆಯಾಗಿ ಒಂದೇ ಕ್ಷಣಕ್ಕೆ ಇಪ್ಪತ್ತು ಮಕ್ಕಳು ಮಾಡೋವಷ್ಟು ತ್ರಾಣ ಇದೆ ಗೊತ್ತಾ? ಏನೂಂತ ತಿಳ್ಕೊಂಡ್ರಿ ನನ್ನ? ಬರೀ ಪಡಪೋಶಿ ಕವಡೆ ಮಗಚೋನು ಅಂತ ತಿಳ್ಕೊಂಡ್ರಾ? ಸಿಟ್ಟು ಎಷ್ಟು ಬರ್ತದೆ ಅಂದ್ರೆ ಸಿಟ್ಟಿನಲ್ಲಿ ಮಾತೇ ಬರೋಲ್ಲ.

ಏನೂಂತ ತಿಳ್ಕೊಂಡ್ರಿ ನನ್ನ? ಏನೂಂತ ತಿಳ್ಕೊಂಡ್ರಿ?

ಹೌದು. ಏನೂಂತ ತಿಳ್ಕೊಂಡ್ರಿ ನನ್ನ......

(ವಿಪರೀತ ಕೆಮ್ಮುತ್ತಾನೆ. ಕೂರುತ್ತಾನೆ)

ಋಗ್ವೇದಿ : ಜೋಯಿಸರೆ ಕೂತ್ಕೊಳ್ಳಿ.

ಶ್ರೋತ್ರಿ : ಪುರೋಹಿತರೇ ನೀವು ಹಾಗೆಲ್ಲಾ ಮಾತಾಡುವುದಲ್ಲ.

(ಒಳಗಿನಿಂದ ಸರಸರನೆ ಪುರೋಹಿತರ ಹೆಂಡತಿ ಬರುವಳು)

ಹೆಂಡತಿ : ಕಾಷ್ಠಕ್ಕೆ ಹೋಗುವವರಿಗೆ ನನ್ನ ಮಗಳನ್ನು ಕೊಡುವುದಿಲ್ಲ. ಬೇಕಿದ್ದರೆ ಹಾಳು ಬಾವಿಗೆ ಹಾಕ್ತೇನೆ ಅಷ್ಟೆ.

ಜೋಯಿಸ : (ಕೆಮ್ಮುತ್ತಲೆ) ಈ ಮನೆಯಲ್ಲಿ ಹೆಂಗಸರನ್ನು ಹೆಗಲ ಮೇಲೆ ಕೂರಿಸಿದ್ದಾರೆ.

ಪುರೋಹಿತ : ನನ್ನ ಮಗಳನ್ನು ಯಾರಿಗೆ ಧಾರೆ ಎರೀಬೇಕು ಅಂತ ನಂಗೊತ್ತು ನಡಿಯಾಚೆಗೆ. (ಅವಳು ಅಲ್ಲಿಯೇ ನಿಲ್ಲುವಳು)

ಋಗ್ವೇದಿ : (ನಯನಾಜೂಕಿನಿಂದ) ಪುರೋಹಿತರೇ ಯೋಚನೆ ಮಾಡಿ ನನಗೆ ಗೊತ್ತು-ನಿಮ್ಮ ಮಗಳು ಮೈನೆರೆದಿದ್ದಾಳೆ. ನಾವು ಎಲ್ಲಿಯಾದರೂ ಶ್ರೀಮಠಕ್ಕೆ ತಿಳಿಸಿದರೆ ನಿಮ್ಮನ್ನು ಜಾತಿಯಿಂದ ಬಹಿಷ್ಕಾರ ಹಾಕ್ತಾರೆ. ಆಗ ನಿಮ್ಮ ಮಗಳನ್ನು ಯಾರು ಮದುವೆ ಆಗ್ತಾರೆ ಹೇಳಿ?

ಶ್ರೋತ್ರಿ : (ಪುರೋಹಿತರ ಹತ್ತಿರ ಬಂದು) ಇಲ್ಲಿ ಬನ್ನಿ. (ಸ್ವಲ್ಪ ದೂರ ಕರಕೊಂಡು ಹೋಗಿ ಗುಟ್ಟಿನಲ್ಲಿ) ಹೇಗೂ ಜೋಯಿಸರು ಮದುವೆಯಾಗ್ತೇನೆ ಅಂದಿದ್ದಾರೆ. ಕನ್ಯಾ ಸೆರೆಯಿಂದ ಮುಕ್ತಿ ಸಿಕ್ಕಿದ ಹಾಗಾಯಿತು. ಜಾತಿಯೂ ಉಳಿಯಿತು. ನಿಮಗೆ ಗೊತ್ತಿಲ್ಲ ಈಗ ಶ್ರೀಮಠದ ಸ್ವಾಮಿಗಳು ಹಿಂದಿನ ಸ್ವಾಮಿಗಳಂತಿಲ್ಲ. ಬಾಳಾ ಜೋರಿನವರು. ಅದೂ ಅಲ್ಲದೆ ನಾವೆಲ್ಲ ಒಗ್ಗಟ್ಟಾಗಿರಬೇಕೆಂದು ಧರ್ಮಪ್ರಚಾರ ಆಚಾರ ವಿಚಾರ ವಿಷಯದಲ್ಲಿ ತುಂಬಾ

ನಿಗಾವಹಿಸಿದ್ದಾರೆ. ಆರ್ಯಧರ್ಮ ಉಳಿಯಬೇಕೆಂದು ಅಹರ್ನಿಶಿ ದುಡಿಯುತ್ತಿದ್ದಾರೆ.

ನಮ್ಮ ಋಗ್ವೇದಿಗಳು ಅವರಿಗೆ ಬಹಳ ಹತ್ತಿರ. ಬಾರಿ ಖಾಸಾ. ಸುಮ್ಮನೆ ವೈರ ಯಾಕೆ? ಮುಂದೆ ನಿಮಗೂ ಶ್ರೀಮಠದ ಕೃಪ ಸಿಕ್ಕರೂ ಸಿಗಬಹುದು. ಮತ್ತೊಂದು ಹೇಳ್ತೇನೆ ಕೇಳಿ-ಈ ಜೋಯಿಸರು ಸರಿಯಾಗಿ ಕೂಡಿ ಇಟ್ಟಿದ್ದಾರೆ. ಕನ್ಯಾಶುಲ್ಕ ಕೊಡಿ ಅಂದು ಬಿಡಿ. ಕೊಡ್ತಾರೆ. ನಿಮ್ಮ ಖರ್ಚಿಗೂ ಆಯಿತು. ಒಂದು ಕಲ್ಲಿಗೆ........ ಗೊತ್ತಾಯ್ತಲ್ಲ. (ಕಣ್ಣು ಮಿಟುಕಿಸುತ್ತಾನೆ. ಪುರೋಹಿತ ತಲೆಯಲ್ಲಾಡಿ ಸುತ್ತಾನೆ)

ಶ್ರೋತ್ರಿ : ನಾನು ಒಪ್ಪಿಸಿದ್ದೇನೆ. ಎಲ್ಲರೂ ಒಪ್ಪಬೇಕು. ಏನಮ್ಮ?

ಋಗ್ವೇದಿ : ಸರಿಯಪ್ಪ. ನಾಕು ಜನ ಒಪ್ಪಿದರೆ ಮುಗಿಯಿತು.

ಶ್ರೋತ್ರಿ : ಜೋಯಿಸರೆ

ಜೋಯಿಸ : (ಕಂಕುಳನ್ನು ಕೆರೆಯುತ್ತಾ)ಹ್ಞೂಂ.

ಶ್ರೋತ್ರಿ : ಪುರೋಹಿತರೆ ಎಲೆಯಡಿಕೆ ತಟ್ಟೆ ತರ್ರಿ.

(ಪುರೋಹಿತರು ತರುತ್ತಾರೆ)

ಶ್ರೋತ್ರಿ : ಜೋಯಿಸರ ಪರವಾಗಿ ಋಗ್ವೇದಿ ತೆಗೆದುಕೊಳ್ಳಿ. ವಿಷಯ ಏನಪ್ಪಾ ಅಂದ್ರೆ-ಪುರೋಹಿತರ ಮಗಳಾದ ಸೌಭಾಗ್ಯಲಕ್ಷ್ಮಿ ಕುಮಾರಿ ಗೌರಿಯನ್ನು ಜಮದಗ್ನಿ ಗೋತ್ರೋತ್ಪನ್ನರಾದ ದಿ. ವೆಂಕಟರಮಣ ಜೋಯಿಸರ ಪ್ರಥಮ ಪುತ್ರ ಅಪ್ಪಣ್ಣ ಜೋಯಿಸರಿಗೆ ಬರುವ ಶುಭವಾರ. ಶುಭನಕ್ಷತ್ರ, ಶುಭಕರಣದಲ್ಲಿ ಮದುವೆ ಮಾಡಿ ಕೊಡುವುದಾಗಿ ನಾವೆಲ್ಲರೂ ಹಿರಿಯರು ನಿಶ್ಚಯಿಸಿದ್ದೇವೆ. ಈ ತಟ್ಟೆ ಬದಲಾಯಿಸಿ ಕೊಳ್ಳಿ.

(ಬದಲಾಯಿಸಿಕೊಳ್ಳುವರು) ಜೋಯಿಸರೆ, ಹೇಳುವುದಕ್ಕೆ ಬಿಟ್ಟು ಹೋಯಿತು-ನಿಮಗೆ ಇದು ಎರಡನೆಯ ಮದುವೆ. ಹಾಗಾಗಿ ಕನ್ಯಾ ಶುಲ್ಕ ರೂಪವಾಗಿ ಇಂತಿಷ್ಟು ದಕ್ಷಿಣೆಯನ್ನು ಕನ್ಯೆಯು ಸಣ್ಣವಳಾಗಿರುವುದರಿಂದ ಅವಳ ಹೆಸರಿಗೆಂದು ಪ್ರತ್ಯೇಕವಾಗಿ ನಿಮ್ಮ ಜಮೀನನ್ನು ಬರೆಯಬೇಕು. ಮದುವೆಯ ಖರ್ಚು ನಿಮ್ಮದೇ.

ಜೋಯಿಸ : ಹಾಂ!

ಋಗ್ವೇದಿ : ಇದು ಲಕ್ಷಕ್ಕೊಂದು ಮಾತು!

ಪುರೋಹಿತನ ಹೆಂಡತಿ: ಅಯ್ಯೋ ದೇವರೆ! (ಲಟಿಕೆ ಮುರಿಯುತ್ತಾ ಒಳಗೆ ಹೋಗುವಳು)

ಪುರೋಹಿತ : ಓಂ, ಗಂ ಗಣಪತಯೇ ನಮಃ
ಓಂ ಶಿವಾಯಃ
ಅಳಿಯಂದಿರು ನಮ್ಮ ಕೈ ಬಿಡಬಾರದು.

ಋಗ್ವೇದಿ : ಇನ್ನೂ ನಿಮ್ಮ ಮಗಳ ಧಾರೆಯೆರೆದಿಲ್ಲ. ಅದಕ್ಕೆ ತಯಾರು ಮಾಡಿ. ಊಟವಂತೂ ಭರ್ಜರಿಯಾಗಬೇಕಪ್ಪಾ, ಪಾಯಸ-ಹೋಳಿಗೆ-ಇರಲಿ.

ಶ್ರೋತ್ರಿ : ಜೊತೆಗೆ- ಇನ್ನೆರಡು ಸಿಹಿ ಇದ್ದರೆ ಒಳ್ಳೆಯದು.
ಮುದುಕನ ಮದುವೆ ಸಿಹಿ ಇತ್ತು ಅಂತಾರೆ

ಜೋಯಿಸ : ನಾನು ಏನು ಹೇಳ್ತೀನಪ್ಪ ಅಂದ್ರೆ ಯಾರೂ ತಪ್ಪು ತಿಳಿಯಬಾರದು- ಎಲ್ಲಾ ಸರಿ. ನೀವೂ ಹೇಳಿದ್ದಕ್ಕೆ ಒಪ್ಪಿದ್ದೇನೆ ಆದರೆ ನಿಮಗೆ ಯಾರಿಗೂ ಒಮ್ಮೆಯೂ ವಧುವನ್ನು ತೋರಿಸಬೇಕೂಂತ ಅನ್ನಿಸಲೇ ಇಲ್ವಲ್ಲ?

ಋಗ್ವೇದಿ : (ಶ್ರೋತ್ರಿಯ ಮುಖ ನೋಡಿ) ಚಪಲ ಬಿಡೋಲ್ಲ, ಹೋಗ್ಲಿ ಬಿಡಿ. ಕರೆಸಿ ಪುರೋಹಿತರೆ.

ಪುರೋಹಿತ : ಗೌರಿಯನ್ನು ಕರಕೊಂಡು ಬಾರೆ.
ಅಳಿಯಂದಿರು ನೋಡಬೇಕಂತೆ
[ಗೌರಿಯು ನೀರಿನ ಲೋಟ ಹಿಡಿದುಕೊಂಡು ಬರುವಳು. ಜೋಯಿಸನ ಹತ್ತಿರ ಬರುವಾಗ ತಲೆ ತಗ್ಗಿಸುವಳು.) ಜೋಯಿಸ ಅವಳ ಕೈ ಮುಟ್ಟುವನು.] (ನರ್ತಿಸುವನು) (ಕಂಪನಿ ನಾಟಕ ಶೈಲಿ)

**ಚಂದಿರನ ಮೊಗದವಳೆ**
**ತಾವರೆಯ ಕಣ್ಣವಳೆ**
**ಬಾರೆ ಬಾರೆ ನಲಿನಲಿದು** ||1||
**ಇತ್ತ ಬಾರೆ. ಬಾರೆ ಬಾರೆ ನನ್ನ ಚೆಲುವೆ (ಮಧ್ಯ ನಿಲ್ಲಿಸಿ)**
ಈ ಹಾಡು ಬೇರೆ ಬರೋಲ್ಲ ನನ್ನ ಕರ್ಮ! ಯಾವುದಾದರೇನು?

ತಾಯೆ ಬಾರ ಮೊಗವ ತೋಥಾ
ಕನ್ನಡಿಗರ ಮಾತೆಯೇ ತಾಯೆ ಬಾರ ಮೊಗವ ತೋರಾ
ಕನ್ನಡಿಗರ ಮಾತೆಯೇ ||1||
ರಸಗಂಗೆಯಲ್ಲಿ ಈಜಾಡುವ

(ಗೌರಿ ಒಳಗೆ ಹೋಗುವಳು)

ಋಗ್ವೇದಿ : (ಬಂದು) ಏನು ಹುಚ್ಚು ಜೋಯಿಸರೆ ನಿಲ್ಲಿಸಿ.

ಜೋಯಿಸ : ಹುಚ್ಚು ಹಿಡಿಸುವ ರೂಪ, ಇವಳು ಪುರೋಹಿತರ ಮಗಳಾ?

ಶ್ರೋತ್ರಿ : ಬೇರೆ ಅರ್ಥ ಬರುತ್ತೆ.

ಜೋಯಿಸ : ಕೇಳಿದೆ ಅಷ್ಟೆ. ನಾಳೆಯೇನಾದರೂ ಮದುವೆ ಮುಹೂರ್ತ ಇದ್ದಿದ್ದರೆ ಅನುಕೂಲವಿತ್ತು.

ಋಗ್ವೇದಿ : ಅಯ್ಯೋ ನಿಮ್ಮ ಮರುಳೆ.

ಶ್ರೋತ್ರಿ : ಸಿದ್ಧತೆ ನಡೀಲಿ. ನಾವಿನ್ನು ಬರ್ತೇವೆ.

ಪುರೋಹಿತ : ಓಂ ಗಂ ಗಣಪತಯೇ ನಮಃ ಏಯ್ ದರಿದ್ರ (ಒಳಗೆ ಹೋಗುವನು)



# ದೃಶ್ಯ 6

(ನವಾಬ ಕತ್ತಲೆಯ ದಾರಿಯಲ್ಲಿಯೇ ನಡೆಯುತ್ತಾ ಬರುತ್ತಾನೆ. ನಿಧಾನವಾಗಿ ಜೀರುಂಡೆಗಳ ಸದ್ದು. ಕಾಡಿನ ದೃಶ್ಯ) (ಅರೆಗತ್ತಲೆ)

ನವಾಬ : ಕಾಡು ಕೂಡಾ ಮೌನವಾಗಿಲ್ಲ. ವಿಚಿತ್ರವಾದ ಸದ್ದುಗಳನ್ನು ಹೊಟ್ಟೆಯೊಳಗೆ ಇಟ್ಟುಕೊಂಡು ಏನೂ ಆಗದಿರುವಂತೆ ಮೌನದ ನಾಟಕವನ್ನು ಆಡುತ್ತಿದೆ. ರಹಸ್ಯಗಳನ್ನು ಬಚ್ಚಿಟ್ಟು ಪ್ರತಿಯೊಬ್ಬರಂತೆ ಈ ಕಾಡಿನಲ್ಲಿ – ಈ ರಹಸ್ಯಗಳ ನಡುವೆ ನಡೆಯುವುದು ಕೂಡಾ ಒಂದು ಅನುಭವ. ಆದರೂ ನನಗೆ ಸದ್ದು ಬೇಕಿರಲಿಲ್ಲ. ಸದ್ದಿಲ್ಲದ ಜಾಗ ಹುಡುಕಿಕೊಂಡು ಬಂದರೆ ಈ ಕತ್ತಲೆಯಲ್ಲಿಯೂ ವಿಚಿತ್ರವಾದ ಸದ್ದುಗಳು. ಸಂಜೆಯ ವೇಳೆ ಅರಮನೆಯನ್ನು ಬಿಟ್ಟು ಹೊರಟೆ –ಈಗ ಹೊತ್ತು ಎಷ್ಟಾಗಿರಬಹುದು? (ಒಂದು ಸಣ್ಣ ನಗು) ಎಷ್ಟಾದರೇನಂತೆ? ನಾನ್ಯಾಕೆ ಚಿಂತಿಸಬೇಕು? ಅಥವಾ ನನಗಾಗಿ ಚಿಂತಿಸುವವರು ಯಾರಿದ್ದಾರೆ? ಸಂಬಂಧಗಳೇ ವಿಚಿತ್ರ! ಈಗಂತೂ ಈ ಕಾಡಿನಲ್ಲಿ ಹಾದಿಗಳೇ ಇಲ್ಲ. ನಡೆದದ್ದು ಹಾದಿ. ಮುಟ್ಟಿದ್ದು ಗುರಿ.

ಗುರಿಯಿಲ್ಲದೆ, ದಾರಿಯಿಲ್ಲದೆ ಸಾಗುವುದು ಕೂಡಾ ಕುತೂಹಲಕಾರಿ. ಎಲ್ಲಿಗೆ ತಲುಪುವುದೋ ಅಲ್ಲಿಗೆ. ಎಲ್ಲಿ ನಿದ್ದೆ ಬರುವುದೋ ಅಲ್ಲಿ ನಿದ್ದೆ. ಬಾವಿ ಸಿಕ್ಕರೆ ನೀರು. ಹಸಿವೆಯಾದರೆ – ಸಿಕ್ಕಿದರೆ ಗೆಡ್ಡೆಗೆಣಸು. ಸಾಧಿಸಲು ಸಾಧ್ಯವಾದರೆ ನಾನು ಜೀವನದ ಮೆಟ್ಟಿಲಲ್ಲಿ ಒಂದು ಹೆಜ್ಜೆ ಮೇಲಕ್ಕೇರಿದಂತೆ ಆಗದಿದ್ದರೆ–ಬೆಳಗಾಗುತ್ತಿದೆ. ಮರಳಿ ಅರಮನೆಯ ಹಾದಿ ಹುಡುಕುತ್ತೇನೆ. ಅದು ಕೂಡಾ ಒಂದು

ಪ್ರಯತ್ನ. ಹಾವು-ಏಣಿಯಾಟದಲ್ಲಿ ಏರಿಳಿತ ಇದ್ದದ್ದೆ. ಏರಬೇಕು. ಇಳಿಯಬೇಕು. (ಹಣೆಯನ್ನು ಉಜ್ಜಿಕೊಳ್ಳುತ್ತಾ) ವಯಸ್ಸಿನ ಗಡಿಯನ್ನು ದಾಟಿದ್ದೇನೆ. ಇಳಿಮುಖದ ವಯಸ್ಸಿನಲ್ಲಿ ನಾನು ನನ್ನೊಳಗನ್ನು ನೋಡಬೇಕು- ಈ ಕಾಡು ಹಾದಿಯಲ್ಲಿ ತತ್ವಜ್ಞಾನ ಹೇಳುವುದು ಸುಲಭ. ಜೀವನದಲ್ಲಿ ಕಂಡುಂಡು ಕಾಣುವುದು- ಅದನ್ನು ಅನುಭವಿಸಿ ಮತ್ತೆ ನಾವೇ ಹೇಳುವುದು ಎಷ್ಟೊಂದು ಕಷ್ಟ?

(ಮುಂದಕ್ಕೆ ನಡಿಯುತ್ತಾನೆ) ಸ್ವಲ್ಪ ತಡೆದು ಹಿಂತಿರುಗಿನೋಡಿ) ಯಾವುದೋ ಕಾಡು ಪ್ರಾಣಿಯೊಂದು ಓಡಾಡುತ್ತಿರುವಂತಿದೆ.

(ಆಲಿಸುತ್ತಾನೆ)

"ಸದ್ದು ಹತ್ತಿರದಿಂದ ಕೇಳಿಸುತ್ತಿದೆ"

"ತರಗೆಲೆಯ ಸದ್ದು"

"ನಿರಾಯಧನಾಗಿರುವುದು ತಪ್ಪು"

(ಸೊಂಟದಿಂದ ಸಣ್ಣ ಕತ್ತಿಯನ್ನು ಕೈಗೆತ್ತಿಕೊಳ್ಳುವನು ಮತ್ತು ಯುದ್ಧಕ್ಕೆ ಸಿದ್ಧನಾಗುವಂತೆ ಮಂಡಿಯೂರಿ ಕುಳಿತುಕೊಳ್ಳುತ್ತಿರುವಾಗಲೇ ಸಣ್ಣ ಕಾಲು ಗೆಜ್ಜೆಯ ಧ್ವನಿಯು ಕೇಳಿಸುವುದು)

ನವಾಬ : ಕಾಲು ಗೆಜ್ಜೆಯ ಧ್ವನಿಯಂತೆ ಕೇಳಿಸುತ್ತದೆ.

ಇದು ಯಾವ ರೀತಿಯ ಪ್ರಾಣಿಯಿರಬಹುದು.

ಮನುಷ್ಯರ ಧ್ವನಿಯನ್ನು ಅನುಕರಿಸುವ ಪ್ರಾಣಿಗಳಿವೆಯಂತೆ. ಕೇಳಿದ್ದೇನೆ. ಕಾಲುಗೆಜ್ಜೆಯನ್ನು ಕಟ್ಟಿಕೊಂಡು ಕುಣಿಯುವಂತಿರುವ ಧ್ವನಿಯನ್ನು ಅನುಕರಿಸುವ ಪ್ರಾಣಿಗಳು ಇವೆಯೋ ಏನೋ? ಕತ್ತಲೆ ಮತ್ತು ನಿಗೂಢವಾದ ಕಾಡಿನಲ್ಲಿ ಯಾವಾವ ರಹಸ್ಯದ ಒಗಟುಗಳು ಅಡಗಿವೆಯೋ? ಯಾರಿಗೆ ಗೊತ್ತು? ತರ್ಕ ಪಾರಮ್ಯದ ಕೊನೆಯಾಚೆಗೂ ರಹಸ್ಯಗಳು ಇರಬಹುದು. ರಹಸ್ಯಗಳು ಇಲ್ಲವೆಂದು ಹೇಳಲು ನಾನು ಯಾರು? ದೊಡ್ಡ ಮರಗಳ ಎದುರು ಸಣ್ಣ ಮನುಷ್ಯ ನಾನು. ನೋಡುತ್ತೇನೆ ಕತ್ತಲಲ್ಲಿ ಕಣ್ಣಿಗೆ ನಿಲುಕುವುದೋ-ಇಲ್ಲವೋ ನಿಟ್ಟುಸಿರು ಬಿಡುತ್ತಾನೆ.

(ಕಾಲು ಗೆಜ್ಜೆಯ ಧ್ವನಿಯು ಹೆಚ್ಚುತ್ತದೆ)

(ನವಾಬ ಮೈಯನ್ನು ಕುಗ್ಗಿಸಿಕುಳಿತುಕೊಳ್ಳುತ್ತಾನೆ.)

ಸಣ್ಣ ವಯಸ್ಸಿನ ಹುಡುಗಿಯೊಬ್ಬಳು ತಲೆಗೂದಲು ಬಿಚ್ಚಿಕೊಂಡು ಓಡಿಕೊಂಡು, ಎದುಸಿರು ಬಿಡುತ್ತಾ ಬರುತ್ತಾಳೆ. ನವಾಬನನ್ನು ತಾಗಿ ಉರುಳಿಬಿದ್ದು ಜೋರಾಗಿ 'ಅಯ್ಯೋ, ದೆವ್ವ, ದೆವ್ವ' ಎಂದು ಕಿರುಚಿ ಮೂರ್ಛೆ ತಪ್ಪಿ ಬೀಳುತ್ತಾಳೆ.

ನವಾಬ : (ಬಿದ್ದ ಹುಡುಗಿಯನ್ನು ಉಪಚರಿಸುತ್ತಾನೆ) ಅಯ್ಯೋ ಪಾಪ, ಒಬ್ಬಳು ಹುಡುಗಿ. ತನ್ನ ರುಮಾಲು ಬಿಚ್ಚಿ ಗಾಳಿ ಬೀಸುತ್ತಾನೆ.

ನವಾಬ : ಇಲ್ಲಮ್ಮಾ, ನಾನು ದೆವ್ವವಲ್ಲ. ನಾನೊಬ್ಬ ದಾರಿಹೋಕ. ಕತ್ತಲಾಯಿತು ಅಂತ ಆ ಕಾಡಿನಲ್ಲಿ ದಾರಿ ಸಿಕ್ಕದೆ ಈ ಮರದ ಕೆಳಗೆ ಕುಳಿತೆ. ಅಷ್ಟೆ. ಹೆದರಬೇಡ.

ಯುವತಿ : (ಕುಳಿತುಕೊಂಡು ಅಳುತ್ತಾ) ನಂಗೆ ಭಯವಾಗುತ್ತದೆ.

ನವಾಬ : ಭಯಪಡಬೇಡ. ನಿನಗೆ ನಾನಿದ್ದೇನೆ.

(ಅವಳ ತಲೆಯನ್ನು ಸವರುತ್ತಾ) ನೋಡಮ್ಮಾ-ನಾನಿದ್ದೇನೆ- ಹೆದರಬೇಡ ಯಾಕೆ ಹೆದರಿಕೆ?

(ಯವತಿ ಮತ್ತೂ ಜೋರಾಗಿ ಅಳುತ್ತಾಳೆ)

ನವಾಬ : ಯಾಕಮ್ಮ? ಏನಾಯಿತು?

ಯುವತಿ : ಏನಿಲ್ಲ ಬಿಡಿ. ಭಯವಾಯಿತು ಅಷ್ಟೆ. ನೀವು ಹೋಗಿ.

ನವಾಬ : (ನಗುತ್ತಾ) ನೀನು ಬರುವ ಮೊದಲೇ ನಾನು ಇಲ್ಲಿದ್ದೆ. ಈಗ ಹೋಗಬೇಕಾದ್ದು ನಾನೋ-ನೀನೋ?

ಯುವತಿ : (ಕಣ್ಣೀರು ಒರೆಸಿಕೊಳ್ಳುತ್ತಾ) ಇಲ್ಲ- ನಾನೇ ಹೋಗ್ತೇನೆ. ನನಗೆ ತಿಳಿಯಲಿಲ್ಲ. ತಿಳಿಯದೆ ತುಳಿದುಬಿಟ್ಟೆ. (ಹೊರಡುವುದಕ್ಕೆ ತಯಾರಾಗುತ್ತಾಳೆ)

ನವಾಬ : ಎಲ್ಲಿಗೆ ಹೋಗ್ತಿಯಾ?

ಯವತಿ : ಗೊತ್ತಿಲ್ಲ.

ನವಾಬ : ಗೊತ್ತಿಲ್ಲ?

ಯವತಿ : ಹೌದು. ಗೊತ್ತಿಲ್ಲ.

ನವಾಬ : ಹೋ. ಸರಿಯಾಯಿತು.

ಯುವತಿ : ಯಾವುದು?

ನವಾಬ : ಗೊತ್ತಿಲ್ಲದಿರುವುದು.

ಯವತಿ : ನಿಜ ಹೇಳ್ತೇನೆ.

ನವಾಬ : ಗೊತ್ತು-ಗುರಿಯಿಲ್ಲದೆ ನಾನೂ ಹೊರಟಿದ್ದೇನೆ.

ಯುವತಿ : ಅದಕ್ಕೆ ನಾನೇನು ಮಾಡ್ಬೇಕು.

ನವಾಬ : (ನಗುತ್ತಾ) ವಿಷಯ ಹೇಳಿದೆ: ನಿನಗೂ-ನನಗೂ ಇಬ್ಬರಿಗೂ ಗೊತ್ತು- ಗುರಿ ಇಲ್ಲ. ಆದರೂ ನೀನು ಗುರಿಯಿಲ್ಲದೆ ನನ್ನ ಮೈಮೇಲೆ ಕಾಲಿಟ್ಟು ಬಿದ್ದೆ. ಆಕಸ್ಮಿಕ ಹೇಗೂ ಸಂಭವಿಸಬಹುದು.

ಯುವತಿ : ಗುರಿಯಿಲ್ಲದ ನೀವು ಕೂತಿದ್ದಿರಿ. ಗುರಿಯಿಲ್ಲದ ನಾನು ನಿಮ್ಮನ್ನು ಎಡವಿದೆ. ಅದರಲ್ಲಿ ಏನಾಯಿತು.?

ನವಾಬ : ಎಡವಿದ್ದಂತೂ ನಿಜ!

ಯುವತಿ : ದಾರಿಹೋಕರಿಗೆ ನಮಸ್ಕಾರ. ನನ್ನ ದಾರಿ ನನಗೆ. ನಿಮ್ಮ ದಾರಿ ನಿಮಗೆ.

ನವಾಬ : ತಡಿ.

ಯವತಿ : ಯಾಕೆ?

ನವಾಬ : ನಿನ್ನೊಂದಿಗೆ ಮಾತಾಡಬೇಕು.

ಯುವತಿ : ನನಗೀಗ ಯಾರೊಂದಿಗೂ ಮಾತಾಡಬೇಕು ಅಂತ ಅನ್ನಿಸುವುದಿಲ್ಲ.

ನವಾಬ : ಯಾರೊಂದಿಗೋ ಅಲ್ಲ- ನೀನು ಎಡವಿದ ಮನುಷ್ಯನೊಂದಿಗೆ.

ಯುವತಿ : ಮನುಷ್ಯರ ಸಹವಾಸವೇ ಬೇಡ. ನನ್ನನ್ನು ಬಿಟ್ಟು ಬಿಡಿ. ಮತ್ತೆ ಮಾತಾಡಿಸಬೇಡಿ. (ಓಡಲು ತೊಡಗುವಳು.) ನವಾಬ ಅವಳ ಕೈಯನ್ನು ಗಟ್ಟಿಯಾಗಿ ಹಿಡಿದುಕೊಳ್ಳುತ್ತಾನೆ.

ನವಾಬ : ಹುಡುಗಾಟಿಕೆ ಬೇಡ. ತಪ್ಪಿಸಿಕೊಳ್ಳಲಾರೆ.

ಯುವತಿ : (ಕಿರಿಚಿಕೊಳ್ಳುತ್ತಾ) ಬಿಡಿ ನನ್ನ, ಬಿಡಿ ನನ್ನ.

ನವಾಬ : (ಜೋರಾಗಿ) ಹಾಗಿದ್ದರೆ. ನಾನು ಹೇಳಿದ ಹಾಗೆ ಕೇಳು.

ಯುವತಿ : ಆಯ್ತು. ಕೇಳುತ್ತೇನೆ. ಕೈನೋಯ್ತದೆ. ಬಿಡಿ.

(ನವಾಬ ಕೈ ಬಿಡುತ್ತಾನೆ ಯವತಿ ಅಳುತ್ತಾ ಕುಳಿತುಕೊಳ್ಳುತ್ತಾಳೆ.)

ನವಾಬ : ದಯಪಿಟ್ಟು ಕ್ಷಮಿಸು. ಹಿಂಸಿಸುವುದು ನನ್ನ ಉದ್ದೇಶವಾಗಿರಲಿಲ್ಲ. ಆದರೆ ಅನಿವಾರ್ಯವಾಯಿತು.

ಯುವತಿ : (ಅಳುತ್ತಾ ಕೈ ಮುಗಿದು) ನನ್ನದು ತಪ್ಪಾಯಿತು.

ನವಾಬ : ತಪ್ಪು ಒಪ್ಪುಗಳ ಮಾತುಗಳು ಹಾಗಿರಲಿ.

ಯುವತಿ : ನಾನೀಗ ಏನು ಮಾಡಬೇಕು?

ನವಾಬ : ದಾರಿಯಲ್ಲಿ ಕಾಡುಪ್ರಾಣಿಗಳಿವೆ. ಅದೂ ಸಣ್ಣ ವಯಸ್ಸಿನ ಹುಡುಗಿ ನೀನು.

ಯುವತಿ : ಕಾಡು ಪ್ರಾಣಿಗಳಿಗೆ ಸಿಕ್ಕು ಸತ್ತರೂ ಅಡ್ಡಿಯಿಲ್ಲ. ನಾನು ಸಾಯಬೇಕೂಂತ ಬಂದವಳು.

ನವಾಬ : ಸಾಯುವ ವಯಸ್ಸು ನಿನ್ನದಲ್ಲ. ಸಾಯುವ ಗಳಿಗೆಗಳು ಬಂದಿರುವುದು ನನಗೆ. ಐವತ್ತು ದಾಟಿರುವವರಿಗೆ ಸಾವು ಎಷ್ಟು ಹೊತ್ತಿಗೂ ಬರಬಹುದು. ಅದಕ್ಕಾಗಿ ನಾನು ಚಿಂತೆಪಡುತ್ತಿಲ್ಲ. ನಾನು ಸಾವನ್ನು ಇಷ್ಟಪಡುತ್ತೇನೆ. ತುಂಬುತೋಳುಗಳಿಂದ ಅದನ್ನು ಆಹ್ವಾನಿಸುತ್ತೇನೆ ನನಗೆ ಅದು ಪ್ರಿಯವಾಬುದು. (ಬಾವುಕನಾಗಿ) (ಆಕಾಶವನ್ನು ನೋಡುತ್ತಾ) ಎಲ್ಲಾ ಮಾನಸಿಕ ಹಿಂಸೆಯಿಂದ ಮುಕ್ತನಾಗಲು ಇರುವುದು ಒಂದೇ ದಾರಿ–ಸಾವು– ಅದರಿಂದ ಎಲ್ಲಾ ಕಿರಿಕಿರಿಯಿಂದ ನಾನು ದೂರ ಹೋಗುತ್ತೇನೆ. ಆಗ ಇಡಿಯ ಜಗತ್ತು ನನ್ನ ಮರೆಯುತ್ತದೆ.

ನನಗೆ ನಿತ್ಯ ಹಿಂಸೆ ಕೊಡುವವರು ಆನಂದ ಹೊಂದುತ್ತಾರೆ. ಅವರು ಸಂತೋಷದಿಂದ ನನ್ನ ಹೆಣದ ಮುಂದೆ ಬಿರಿಯಾನಿ ತಿನ್ನುತ್ತಾರೆ. (ಅವಳ ಬೊಗಸೆಯನ್ನು ಹಿಡಿದು) ನನ್ನದು ಸಾವನ್ನು ನಿರೀಕ್ಷಿಸುವ ಕಾಲ. ಅದಕ್ಕಾಗಿ ಕಾಯುತ್ತೇನೆ. ಆದರೆ ಆತ್ಮಹತ್ಯೆ ಮಾಡಿಕೊಳ್ಳಲಾರೆ. ನನ್ನ ಮನಸ್ಸನ್ನು; ಹೃದಯವನ್ನು ಕುದಿಯುವ ಬಾಣಲೆಯಲ್ಲಿ ಬೇಯಿಸುತ್ತಾ–ನಗುತ್ತಾ ಇರುವವರ ಎದುರು ಮೌನವಾಗಿ ನಿಶ್ಯಬ್ದವಾಗಿ ಒಂದೊಂದೇ ಕ್ಷಣ ಆತ್ಮಹತ್ಯೆಯ ಹಾದಿಯನ್ನು ನಾನೇ ಕಂಡುಕೊಂಡಿದ್ದೇನೆ. ನಿಧಾನವಾಗಿಯೇ ಸಾಯುವುದು, ನಿಧಾನವಾಗಿ ನೋವು ತಿನ್ನುತ್ತಾ ನರಳುವುದು. ಆದರೆ– ನೀನಿನ್ನೂ ಸಣ್ಣ ತಾವರೆಯ ಮೊಗ್ಗು. ನೀನು ಅದನ್ನು ಕನಸಿನಲ್ಲಿಯೂ ಯೋಚಿಸಬಾರದು. ನನ್ನ ಮುಖ ನೋಡಿ ಹೇಳು–

ಸಾವು:ಒಂಟಿತನ: ಯಾವುದೂ ನಿನ್ನ ಉಸಿರಿಗೆ ಸೋಂಕಬಾರದು. (ಅವಳ ಕೆನ್ನೆಗೆ ತಟ್ಟಿ) ಕೊಂಚನಗು. ನಗುವುದನ್ನು ಕಲಿ- ಕತ್ತಲೆಯಲ್ಲಿಯೂ.

ಯವತಿ : (ಅವನ ಮುಖ ನೋಡುತ್ತಾ) ನೀವು ಯಾರು?

ನವಾಬ : ಯಾರೋ ಒಬ್ಬ ದಾರಿ ಹೋಕ. ಹೆಸರಿಲ್ಲ. ಊರಿಲ್ಲ. ಗುರಿಯಿಲ್ಲ. ಬಂದ ದಾರಿಯ ನೆನಪಿಲ್ಲ. ಹುಟ್ಟಿದ್ದು ಗೊತ್ತಿಲ್ಲ.

ಯುವತಿ : (ಮುಗ್ಧಳಾಗಿ) ನೀವು ಸುಳ್ಳು ಹೇಳುತ್ತಿದ್ದೀರಿ ಅಂತ ಅನಿಸುತ್ತದೆ.

ನವಾಬ : ಒಂದು ಅರ್ಥದಲ್ಲಿ ಸುಳ್ಳು. ಒಂದು ಅರ್ಥದಲ್ಲಿ ನಿಜ.

ಯುವತಿ : ನನಗೆ ಯಾವುದೂ ಗೊತ್ತಾಗುವುದಿಲ್ಲ.

ನವಾಬ : ಹೋಗಲಿ ಬಿಡು- ನೀನು ಯಾರು? ನೀನಾದರೂ ನಿಜ ಹೇಳು.

ಯುವತಿ : ನಾನು ಗೌರಿ.

ನವಾಬ : ಈ ನಾಡಿನಲ್ಲಿ ಸಾವಿರ ಗೌರಿಯರು ಇದ್ದಾರೆ.

ಯುವತಿ : ಅಲ್ಲ. ನಿಜವಾಗಿಯೂ ನಾನು ಗೌರಿಯೇ.

ನವಾಬ : ನೀನು ಗೌರಿ ಅಲ್ಲ ಅಂತ ಹೇಳುತ್ತಿಲ್ಲ. ಆದರೆ ಯಾವ ಗೌರಿ?

ಯುವತಿ : ಅಗ್ರಹಾರದ ಪುರೋಹಿತರ ಮಗಳು ಗೌರಿ.

ನವಾಬ : ಯಾಕೆ ಓಡಿ ಹೋಗುತ್ತಿದ್ದೀಯಾ:

ಗೌರಿ : ನಾನು ನಿಮಗ್ಯಾಕೆ ಹೇಳಬೇಕು?

ನವಾಬ : ಹೇಳುವುದಿದ್ದರೆ ಹೇಳಬಹುದು. ಬಿಟ್ಟರೆ ಬಿಡಬಹುದು. ಅದು ಅವರವರಿಗೆ ಬಿಟ್ಟಿರುವುದು. ಹೇಳುವುದೇ ಇಲ್ಲ ಅಂತ ಹೇಳಲೇಬೇಕು ಅಂತ ಒತ್ತಾಯಿಸ ಹೊರಟರೂ ಪ್ರಯೋಜನವಿಲ್ಲ. ಗುಟ್ಟು ಬಿಡುವುದಿಲ್ಲ. ಎಂದು ಹಟ ತೊಟ್ಟವರನ್ನು ಬೆಟ್ಟ ಹತ್ತಿಸಿದರೂ ಉಪಯೋಗವಿಲ್ಲ. ನಿನ್ನ ಗುಟ್ಟು ನಿನಗಿರಲಿ.

ಗೌರಿ : ಅಂಥಾ ಗುಟ್ಟು ನಾನೇನು ಮಾಡಿದೆ?

ನವಾಬ : ಯಾಕೆ ಓಡಿ ಹೋಗ್ತಿಯಾ ಅಂತ ಕೇಳಿದ್ದಕ್ಕೆ ಉತ್ತರವಿಲ್ಲ.

ಗೌರಿ : ಜೀವನ ಬೇಸರವಾಯಿತು.

ನವಾಬ : ಈ ವಯಸ್ಸಿನಲ್ಲಿ ಅದೆಂಥ ಬೇಸರ?

ಗೌರಿ : ಅದೆಲ್ಲಾ ಹೇಳಲು ನನಗೆ ಮನಸ್ಸಿಲ್ಲ. ನಿಮಗ್ಯಾಕೆ ತೊಂದರೆ?

ನವಾಬ : ಇನ್ನೊಬ್ಬರ ಮಾತನ್ನು ಕಿವಿಯಿಂದ ಕೇಳಿಸಿಕೊಳ್ಳುವುದು ನನಗೆ ಕಷ್ಟವಲ್ಲ. ಮತ್ತೊಬ್ಬರ ಮಾತಿಗೆ ಮನಸ್ಸು ಬಿಚ್ಚಿಡುವುದು ಕೂಡಾ!

ಗೌರಿ : ನನ್ನ ಮಾತನ್ನು ಕೇಳಲು ನನ್ನ ಮನೆಯವರೇ ತಯಾರು ಇರಲಿಲ್ಲ. ಅಪ್ಪ ಕಿವಿಹಿಂಡಿ, ಬೆನ್ನಿಗೆ ಡಬಡಬ ಗುದ್ದಿ ನಾನು ಹೇಳಿದ ಹಾಗೆ ಕೇಳಿದೆಯೋ ಸರಿ– ಇಲ್ಲಾಂದ್ರೆ ಏನು ಮಾಡ್ತೇನೋ ಗೊತ್ತಿಲ್ಲಾಂದ್ರು, ಅಮ್ಮನಿಗೆ ಹೇಳಿದ್ರೆ ಅಪ್ಪನಿಗೆ ಬೈಯುತ್ತಾ ಮಡಕೆ ಒಡೆದು ಹಾಕಿದ್ರು, ಅಪ್ಪನಿಗೆ ಬೇಜವಾಬ್ದಾರಿ ಅಂತ ಹೇಳಿ ಕೈ ತೊಳೆದುಕೊಂಡು ಬಿಟ್ಟರು. ಯಾರಿಗೆ ಅಂದರೆ ಯಾರಿಗೂ ನನ್ನ ಮಾತು ಕೇಳೋಕೆ ಪುರುಸೋತ್ತಿಲ್ಲ. ಅಮ್ಮ ಅಪ್ಪನ್ನ ಬೈಯೋದು. ಅಪ್ಪ ಅಮ್ಮನ್ನ ಬೈಯೋದು ಯಾರ ಮಾತನ್ನು ಕೇಳಬೇಕು? ಮನೆಯಲ್ಲಿ ಕಿರುಚಾಟ ಒಂದೇ ಮಾತು (ನವಾಬ ಆಲಿಸುತ್ತಾನೆ)– ಹ್ಞಂ ಆಮೇಲೆ.

ಗೌರಿ : ಪಕ್ಕದ ಮನೆಯ ಗೆಳತಿಯ ಮನೆಗೆ ಹೋಗಿ ಹೇಳಿದೆ–ಅವಳು ತುಂಬಾ ಜೋರು. ಹೆಚ್ಚು ಮಾತಾಡಿದ್ರೆ ಈ ಗಂಡಸರನ್ನು ಕೈ ಕಾಲು ಕತ್ತರಿಸಿ– ಸೌದೆ ಮಾಡಬೇಕು. ಬಿಸಿ ನೀರು ಕಾಯಿಸಬಹುದು. ಅಂತ ಹೇಳ್ತಿದ್ದಳು. ಅವಳ ಗಂಡ ಪಾಪದೋನು. ಅವಳ ಸೀರೆ ಒಗ್ದು ಮಡ್ಸಿ ಇಡುತ್ತಿದ್ದ. ಅದಕ್ಕೆ ಹಾಗನ್ನುತ್ತಿದ್ದಳೋ ಏನೋ? ನನ್ನ ಸಮಸ್ಯೆ ಹೇಳಿದೆ. ನಾನು ಕೇಳಿದ್ದಕ್ಕೆ. ನನಗೀಗ ಪುರುಸೋತ್ತಿಲ್ಲ. ಇನ್ನೊಮ್ಮೆ ಬಾ ಅಂತ ಕಳಿಸಿ ಬಿಟ್ಟಳು. ಅವಳ ಭಾಷಣಕ್ಕೆ ಸರಿ ಅಂತ ಬಂದು ಬಿಟ್ಟೆ(ಮತ್ತೆ ಅಳುವುದಕ್ಕೆ ಪ್ರಾರಂಭಿಸುವಳು)

ನವಾಬ : (ಅವಳ ತಲೆ ಸವರಿ) ಈಗ ನಾನು ಕೇಳಿಸಿಕೊಳ್ಳುತ್ತೇನೆ. ಹೇಳು.

ಗೌರಿ : ಅದಕ್ಕೆ ಓಡಿ ಬಂದೆ.

ನವಾಬ : ಯಾಕೆ ಅಂತ ಬೇಕಲ್ಲಾ?

ಗೌರಿ : ನನ್ನನ್ನ ಜೋಯಿಸರಿಗೆ ಮದುವೆ ಮಾಡ್ತಾರಂತೆ.

ನವಾಬ : ಏನಾಯಿತು ಅದರಲ್ಲಿ. ಆಗಿ ಬಿಡು.

ಗೌರಿ : ಆಗಿ ಬಿಡು. ಬಹಳ ಸುಲಭವಾಗಿ ಹೇಳ್ತಿರಾ? ಅವರಿಗೆ ನಿಮ್ಮ ವಯಸ್ಸು ಗಲೀಜು ಮನುಷ್ಯ ಬೇರೆ. ಅವರನ್ನು ನೆನಸಿಕೊಂಡ್ರೆ ಅಸಹ್ಯ ಆಗುತ್ತೆ. ನಾಳೆ ಬೆಳಗ್ಗೆ ಮುಹೂರ್ತ. ಅದಕ್ಕೆ ಮೆಲ್ಲನೆ ಹಿಂಬಾಗಿಲಿನಿಂದ ತಪ್ಪಿಸಿಕೊಂಡು ಈ ಕಾಡಿಗೆ ಓಡಿ ಬಂದೆ.

ಅವನನ್ನು ಕಟ್ಕೊಂಡು ಸಾಯೋಕ್ಕಿಂತ ಈಗ್ಲೇ ಸಾಯೋದು ಒಳ್ಳೇದು ಅಂತ!

ನವಾಬ : ನೀನು ಸತ್ತರೆ ನಿನ್ನ ಜೀವ ಹೋಗುತ್ತೆ. ಅದರಿಂದ ಪ್ರಯೋಜನ ಏನು?

ಗೌರಿ : ನೀವು ಸತ್ತರೆ ನಿಮ್ಮ ಜೀವ ಹೋಗುತ್ತೆ. ಅದರಿಂದ ಪ್ರಯೋಜನ ಏನು?

ನವಾಬ : ತುಂಬಾ ಜಾಣೆ ನೀನು?

ಗೌರಿ : ಹೊಗಳುವುದೆಲ್ಲ ಬೇಡ. ನನ್ನನ್ನು ಬಿಡಿ ಅಷ್ಟೆ.

ನವಾಬ : ನೋಡಮ್ಮ-ನಾನು ಹೇಳುವುದು ಕೇಳು. ಈಗ ಏನೂ ಯೋಚನೆ ಮಾಡಬೇಡ. ನಾಳೆ ಬೆಳಗಿನ ತನಕ ಸಾವಿನ ಯೋಚನೆ ಬಿಡು. ಇಲ್ಲಿಯೇ ನಿದ್ದೆ ಮಾಡು. ಬೆಳಗ್ಗೆ ಎದ್ದ ಮೇಲೆ ಸಾಯಬೇಕು ಅನ್ನಿಸಿದರೆ ಹೊರಟುಹೋಗು. ನಾನು ನನ್ನ ದಾರಿ ಹಿಡಿಯುತ್ತೇನೆ.

ಗೌರಿ : ಮತ್ತೆ ನೀವು?

ನವಾಬ : ಈ ಪುಟ್ಟ ಗೌರಿ ಇಲ್ಲಿ ಮಲಗಿರುತ್ತಾಳೆ.
ಕತ್ತಲೆಯಿರುತ್ತದೆ. ಈ ಕಾಡಿರುತ್ತೆ.
ನನಗೆ ಯೋಚಿಸಲು ತಲೆ ತುಂಬಾ ಬಾರಿ ಯೋಚನೆಯಿರುತ್ತೆ.
ಈಗ ಮಲಗು.

ಗೌರಿ : (ಯೋಚಿಸಿ-ನವಾಬನ ಮುಖ ನೋಡಿ)
ಇದೇ ಸರಿ
ನಾಳೆ ಓಡಿ ಹೋಗುತ್ತೇನೆ.
ಕಾಲೂ ಜುಮು ಜುಮು ಎನ್ನುತ್ತಿದೆ.
ಎಲ್ಲಿ ನಿಮ್ಮ ಕೈಕೊಡಿ,
ನನಗೆ ಭಯ.
(ನಿದ್ದೆ ಹೋಗುತ್ತಾಳೆ)

ನವಾಬ : ಮುಗ್ಧ ವೈದಿಕರ ಹುಡುಗಿ.
ಇವಳಿಗೆ ಸಾವಿನ ಬಯಕೆ.
ಹನ್ನೆರಡು ಹದಿಮೂರರ ವಯಸ್ಸಿನಲ್ಲಿಯೇ
ಈ ಚಿಂತೆ ಇವಳಿಗೆ.
ನನ್ನ ಮುದಿ ಬೆರಳುಗಳನ್ನು ಗಟ್ಟಿ ಹಿಡಿದುಕೊಂಡಿದ್ದಾಳೆ.

ನನ್ನ ಹೋಗುತ್ತಿರುವ ಜೀವವನ್ನು ಮರಳಿ ಹಿಡಿದು ನಿಲ್ಲಿಸುವಂತೆ ಆಕಸ್ಮಿಕಗಳು ಕೂಡಾ ಒಮ್ಮೊಮ್ಮೆ ತುಂಬಾ ಸುಂದರವಾಗಿರುತ್ತದೆ.

**(ಕತ್ತಲೆ-ಬೆಳಕು)**

**(ಗೌರಿಯು ಏಳುತ್ತಾಳೆ)**

ನವಾಬ : ಎಚ್ಚರಾಯಿತೆ?

ಗೌರಿ : ಒಳ್ಳೆಯ ನಿದ್ದೆ.

ನವಾಬ : ನೋಡು– ಈಗ ಹೇಳ್ತೇನೆ. ಕೇಳು.
ನಾನು ಈ ರಾಜ್ಯದ ಸುಲ್ತಾನ.
ಎರಡು ಮಾತಾಡದೆ ನನ್ನೊಡನೆ ಬಾ.
ಇದು ಸುಲ್ತಾನ ಆಜ್ಞೆ.
(ಜೋರಾಗಿ) (ಕತ್ತಿಯನ್ನು ಅವಳ ಹತ್ತಿರ ಹಿಡಿದು)
ಎರಡು ಮಾತಾಡದೆ ನನ್ನ ಹಿಂದೆ ಬಾ. ಅಷ್ಟೆ. ಈಗ ನಿನ್ನ ಯಾವ ಮಾತಿಗೂ ಅವಕಾಶವಿಲ್ಲ.
(ಮೆಲ್ಲಗೆ) ನಿನ್ನ ರಕ್ಷಣೆಯ ಬಾರ ನನಗಿರಲಿ.
ಅದನ್ನು ನಾನು ನೋಡಿಕೊಳ್ಳುತ್ತೇನೆ.

(ಗೌರಿ ಅರ್ಧ ಗಾಬರಿಯಿಂದ ಅವನನ್ನು ಹಿಂಬಾಲಿಸುತ್ತಾಳೆ)



# ದೃಶ್ಯ 7

ಸಖಿ : (ಸ್ವಗತ) (ಗಂಭೀರ)

ಬೇಗಂ ಸರ್ಪ ಎನ್ನುವುದು ಗೊತ್ತು, ನೋಡುವುದಕ್ಕೆ ಚೆಂದ. ಹೆಡೆಯತ್ತಿದರೆ ಕಷ್ಟ. ಮಣಿಸಲು ಬೇಕಾದ ಒಂದೊಂದೇ ದಾರಿಯನ್ನು ನಾನು ಹುಡುಕಬೇಕೆಂದುಕೊಂಡಿದ್ದೆ. ಈವತ್ತು ಅದಕ್ಕೆ ಬೇಕಾದ ಒಂದು ಅವಕಾಶವು ದೊರೆತಿದೆ. ನೋಡಬೇಕು. ಯಶಸ್ವಿಯಾದರೆ ಕಾಶಿಯಲ್ಲಿ ನಾನು ಕಲಿತ ಒಂದು ವಿದ್ಯೆಯಲ್ಲಿ ಒಂದು ಪ್ರಯೋಗದಲ್ಲಿ ವಿಜಯ ಹೊಂದಿದಂತೆ. ನವಾಬನ ಕಿರೀಟದ ಮಣಿಯೊಂದು ಭೂಮಿಗೆ ಬೀಳುತ್ತದೆ. ಬೇಗಂನ ಅಹಂಕಾರದ ವಿಷದಂತವೊಂದು ಕಳೆದು ಹೋಗುತ್ತದೆ. ಆಗ ನನ್ನ ಈ ಹೆಗಲ ಮೇಲಿನ ಶಾಲು ತಲೆಯ ಮೇಲೆ ಬರುತ್ತದೆ. ಏಣಿಯ ಮೆಟ್ಟಿಲು ಏರಬೇಕೋ ಮಾನ ಮರ್ಯಾದೆ ಬಿಡಬೇಕು. ನನ್ನದು ಮೊದಲನೆಯ ಆಯ್ಕೆ. ಎರಡನೆಯದು ಅನಂತರ ನನ್ನ ನೆರಳಿನಂತೆ ಹಿಂಬಾಲಿಸುತ್ತದೆ. ಹಿಂಬಾಲಿಸದೆ ಎಲ್ಲಿ ಹೋಗುತ್ತದೆ. ನೋಡಿಯೇ ಬಿಡುತ್ತೇನೆ. ಮೊದಲು ಅಧಿಕಾರ, ಅನಂತರ ಮಾನಮರ್ಯಾದೆ. ಮರ್ಯಾದೆ ಬಿಟ್ಟರೆ ಅಧಿಕಾರ ಸಿಗುತ್ತೆ, ಮರ್ಯಾದೆ ಇಟ್ಟುಕೊಂಡ್ರೆ ಅಧಿಕಾರ ಸಿಗೋಲ್ಲ. ಅಧಿಕಾರಕ್ಕೆ ಸಂಪತ್ತು: ಹೆಣ್ಣು:ತಂತ್ರ ಎಲ್ಲವೂ ರಹದಾರಿಗಳೇ. ಅಲ್ಲ ಎನ್ನುವ ಮಗ ಯಾರು? ಹೇಗೂ ಇವೊತ್ತು ನವಾಬ ಆಸ್ಥಾನದಿಂದ ಒಬ್ಬಂಟಿಯಾಗಿ ಹೊರಟು ಹೋಗಿದ್ದಾನೆ. ರಾತ್ರಿ ಮರಳುವುದಿಲ್ಲ. ರಾತ್ರಿ ಬೇಗಂ ಒಬ್ಬಳೇ ಇರುತ್ತಾಳೆ. ಇದು ನಿಜವಾಗಿಯೂ ಒಳ್ಳೆಯ

ಕ್ಷಣ. ಒಂದು ಕೈ ನೋಡುತ್ತೇನೆ. ನಾನು ಸೋತರೆ ಇನ್ನೊಂದು ದಾರಿ. ಬೇಗಂ ಸೋತರೆ ನನ್ನದೇ ದಾರಿ. ಅವಳಿಗೆ ಬೇರೆ ದಾರಿಯಿಲ್ಲ.

(ಗಂಭೀರವಾಗಿ ತೆರಳುವನು)

(ಬೇಗಂ ಅಂತಃಪುರದಲ್ಲಿ ಅಡ್ಡಾಡುತ್ತಿರುತ್ತಾಳೆ. ತಟ್ಟನೆ ಸಖ ಮುಸುಕು ಹಾಕಿ ಒಳಕ್ಕೆ ಬರುತ್ತಾನೆ)

ಬೇಗಂ : (ಗಾಬರಿಯಿಂದ) ಏನಿದು? ಹೇಳದೆ ಕೇಳದೆ ಬಂದಿರಲ್ಲ?

ಸಖ : ತಪ್ಪು ತಿಳಿಯಬೇಡಿ. ರಹಸ್ಯ ಕಾರಣಗಳು. ಅರಮನೆಯ ಕಿಟಕಿ ಬಾಗಿಲುಗಳು ಕೂಡಾ ಕಣ್ಣು ಕಿವಿ ಹೊಂದಿದೆ. ಅದಕ್ಕೆ ಹೀಗೆ

ಬೇಗಂ : ಆದರೂ, ಹೆಂಗಸರ ಏಕಾಂತ ಕೊಠಡಿಗೆ ಹೀಗೆ ರಾತ್ರಿ?

ಸಖ : (ಗಂಭೀರವಾಗಿ) ಗೊತ್ತು ಅಂದರೆ ಗೊತ್ತು. ಅದಕ್ಕೆ ನನಗೆ ಪ್ರತ್ಯೇಕ ವಿವರಣೆ ಬೇಕಿಲ್ಲ. ಮೊದಲು ಕೊಠಡಿಯ ಕಿಟಕಿ-ಬಾಗಿಲು ಹಾಕಿ.

ಬೇಗಂ : ಯಾಕೆ?

ಸಖ : ಅದು ಆಮೇಲೆ? ಮೊದಲು ಹಾಕಿ.

(ಬೇಗಂ ಹಾಕುತ್ತಾಳೆ.)

ಬೇಗಂ : ಹೇಳಿ.

ಸಖ : ಕುಳಿತುಕೊಳ್ಳಿ.

ಬೇಗಂ : ಅದೇನು ಬೇಗ ಹೇಳಿ-ಬೇಗ ಹೊರಟು ಹೋಗಿ.

ಸಖ : ನಾನೀಗ ಬಂದುದು ರಾಜಕಾರಣದ ಕುರಿತು ಮಾತನಾಡುವುದಕ್ಕಲ್ಲ.

ಬೇಗಂ : ಮತ್ತೆ (ಮುಸುಕು ತೆಗೆಯುವನು)

ಸಖ : ನಿಮಗೆ ಗೊತ್ತಿಲ್ಲ. ನಾನು ಕಾಶಿಯಲ್ಲಿ ತುಂಬಾ ಕಲಿತು ಬಂದಿರುವವನು, ಹಸ್ತ ಸಾಮುದ್ರಿಕಶಾಸ್ತ್ರ; ಮುಖಮುದ್ರಿಕೆಶಾಸ್ತ್ರ; ಎಲ್ಲಾ ಗೊತ್ತು. ಅದನ್ನು ಹೇಳೋಣ ಅಂತ ಬಂದೆ. ನವಾಬರು ಊರಿನಲ್ಲಿ ಇಲ್ಲ. ನಿಮ್ಮ ಜೀವನ ನೆಮ್ಮದಿಯಿಂದ ಇರಬೇಕಾದರೆ ನೀವು......

ಬೇಗಂ : ಹೋಗಿ ಸುಮ್ಮನೆ.

ಸಖ : ನಂಬದಿದ್ದರೆ ಬೇಡ. ಆದರೆ ಸತ್ಯ ಹೇಳ್ತೀನೆ. ನಿಮ್ಮ ಮುಖದ ಲಕ್ಷಣದ ಪ್ರಕಾರ ನೀವು ಒಂದ[illegible]ಮು ದಿನ ಈ ನಾಡಿನ

ಅಧಿಕಾರ ಸೂತ್ರ ಹಿಡಿಯಬೇಕು. ಆದರೆ ನಿಮಗೆ ನೆಮ್ಮದಿಯಿಲ್ಲ. ಅಧಿಕಾರ ಸೂತ್ರ ಹಿಡಿಯಲು ಕಂಟಕವಿದೆ. ನಿಮಗೆ ನಂಬಿಕೆ ಬಾರದಿದ್ರೆ ನಾನು ಏನೂ ಮಾಡುವುದಕ್ಕೆ ಆಗುವುದಿಲ್ಲ.

ಬೇಗಂ : (ಕುತೂಹಲದಿಂದ) ಏನು ಕಂಟಕ?

ಸಖ : ನವಾಬರೇ ನಿಮಗೆ ಕಂಟಕ.

ಬೇಗಂ : ಅದನ್ನು ಹೇಳಲು ನೀವು ಬೇಕಾ?

ಸಖ : ತೊಲಗಿಸಲು ಅಷ್ಟು ಸುಲಭವಲ್ಲ.

ಬೇಗಂ : ಏನು ಮಾಡಬೇಕು?

ಸಖ : ನೀವು ನೆಮ್ಮದಿ ಕಳೆದುಕೊಂಡಿದ್ದೀರಿ.

ಬೇಗಂ : ನಿಜ.

ಸಖ : ಮದುವೆಯಾದರೂ ಸುಖವಿಲ್ಲ, ನಿಜವೆ?

ಬೇಗಂ : ನಿಮಗೆ ಹೇಗೆ ಗೊತ್ತಾಯಿತು?

ಸಖ : ಗೊತ್ತಾಗುತ್ತದೆ. ಮಂತ್ರಶಾಸ್ತ್ರ ಮಹಾತ್ಮೆ ಅದು.

ಬೇಗಂ : ಹೌದೆ?

ಸಖ : ನಿಮಗೆ ಅಧಿಕಾರ ಸಿಗಬೇಕಾದರೆ.

ಬೇಗಂ : ಏನು ಮಾಡಬೇಕು?

ಸಖ : ನಿಮಗೆ ಸುಖಬೇಕು. ನೀವು ಸುಖ ಕೊಡಬೇಕು. ಹೊರಜಗತ್ತಿಗೆ ಗೊತ್ತಾಗಬಾರದು. ಎಲ್ಲಿ ಕೈನೀಡಿ. ನಿಮ್ಮ ಕೈಯ ರೇಖೆ ಏನು ಹೇಳ್ತದೆ? ·

ಬೇಗಂ : ಅಧಿಕಾರ ಬೇಕು ಅಷ್ಟೆ.

ಸಖ : ಹಾಗಿದ್ದರೆ ಒಂದು ತ್ಯಾಗ ಮಾಡಬೇಕು.
(ಬೇಗಂ ಮೌನ)

ಸಖ : ಹಕ್ಕಿ ಬಿತ್ತು ಬಲೆಗೆ
(ಎದ್ದು ನಿಂತು ಬೇಗಂನ ಹತ್ತಿರ ಬಂದು ನಿಂತು)
ನಿಮಗೆ ಅಧಿಕಾರ ಸಿಕ್ಕೇ ಸಿಗುತ್ತದೆ.
ನೀವು ಈ ನಾಡಿನ ಬೇಗಂ ಆಗ್ತೀರಿ.

ನಿಮಗೆ ಸುಖ-ನೆಮ್ಮದಿ ಸಿಗುತ್ತೆ.

ಪ್ರತಿ ರಾತ್ರಿಯಲ್ಲಿಯೂ ಒಳ್ಳೆಯ ಸವಿ ನಿದ್ದೆ ಬರುತ್ತೆ.

(ಬೇಗಂ ತನ್ನ ಕೈಯನ್ನು ಚಾಚುತ್ತಾಳೆ. ಸಖ ಅವಳ ಕೈಯನ್ನು ಹಿಡಿಯುತ್ತಾನೆ)

ಹಿಂದಿನಿಂದ : ರತ್ತೋ ರತ್ತೋ ರಾಯನ ಮಗಳೆ
ಬಿತ್ತೋ ಬಿತ್ತೋ ಬೀಮನ ಮಗಳೆ.

(ಕತ್ತಲೆ)



# ದೃಶ್ಯ 8

(ನವಾಬ ಮತ್ತು ಸುಖ ಜೊತೆಯಲ್ಲಿ ಬರುವರು. ಸಖ ತನ್ನ ಹಳೆಯ ವಿದೂಷಕನ ವೇಷ ಭೂಷಣದಲ್ಲಿಯೇ ಇರುವನು)

ನವಾಬ : (ಕೊಂಚ ಸಂತೋಷದಿಂದ) ನಿನ್ನೆ ಕಾಡಿಗೆ ಹೋಗಿ ಹಿಂತಿರುಗಿ ಬಂದ ಮೇಲೆ ತುಂಬಾ ಸಂತೋಷವಾಯಿತು.

ಸಖ : (ಕೈಚಪ್ಪಾಳೆ ಹೊಡೆಯುತ್ತಾ) ನನಗೂ ನಿನ್ನೆ ಸಂತೋಷವಾಯಿತು.

ನವಾಬ : ನನಗೆ ಸಂತೋಷವಾಗಿರುವುದು ನಿಜ. ನಿನಗೆ ಹೇಗೆ?

ಸಖ : ನಿಮ್ಮ ಸಂತೋಷವೇ ನನ್ನ ಸಂತೋಷ. ನೀವು ಸುಖಪಟ್ಟರೆ ನಾನು ಸುಖಪಟ್ಟಂತೆ. ನಾನು ಸುಖಪಟ್ಟರೆ ನೀವು ಸುಖಪಟ್ಟಂತೆ ಅಲ್ಲವೆ?

ನವಾಬ : ನಿಜ. ನಿಜ. ನಿಜವಾದ ಸ್ನೇಹಿತರೆಂದರೆ ಹಾಗೇ. ಸುಖ-ದುಃಖದಲ್ಲಿ ಪಾಲುದಾರರು.

ಸಖ : ನೀವು ಕಾಡಿನಲ್ಲಿದ್ದಿರಿ. ನಾನು ನಾಡಿನಲ್ಲಿದ್ದೆ. ಅಷ್ಟೆ.

ನವಾಬ : ಈಗ ನಿನ್ನಿಂದ ಒಂದು ಕೆಲಸವಾಗಬೇಕಾಗಿದೆ. ಅದು ಯಾರಿಗೂ ತಿಳಿಯಬಾರದು.

ಸಖ : ಯಾರಿಗೂ ತಿಳಿಯದಂತೆ ಕೆಲಸ ಮಾಡಬೇಕಾದರೆ ನಾನೇ ಸರಿ. ಏನು ಹೇಳಿ?

ನವಾಬ : ಸಮಸ್ಯೆ ಸೂಕ್ಷ್ಮವಾದದ್ದು.

ಸಖ : ಅದಕ್ಕೆಲ್ಲಾ ಆಲೋಚಿಸಬೇಡಿ. ನನ್ನ ಸೂಕ್ಷ್ಮವಾದ ಮೂಗು, ಕಣ್ಣು, ಕಿವಿ, ಬಾಯಿ, ಸಕಲೇಂದ್ರಿಯಗಳು ಸದಾ ಎಚ್ಚರವಾಗಿರುತ್ತವೆ. ನಿದ್ದೆ ಬರುವಾಗ ಮಾತ್ರ ಒಮ್ಮೊಮ್ಮೆ ಏನಾದರೂ ಗೊತ್ತಾಗುವುದಿಲ್ಲ ಅಂತ ಹೆಂಡತಿ ಹೇಳ್ತಾಳೆ. ಅದು ಅವಳ ದೂರು. ಸಣ್ಣವರ ದೂರನ್ನು ದೊಡ್ಡವರು ಕಿವಿಗೊಡಬಾರದು ಅಂತ ದೊಡ್ಡ ನಿಯಮ ಇಟ್ಟುಕೊಂಡಿದ್ದೇನೆ.

ನವಾಬ : ಅದಲ್ಲ ವಿಷಯ– ಇದು ಮತ ಸಮಸ್ಯೆ.

ಸಖ : ಅಯ್ಯೋ, ಅದಾ ವಿಷಯ –ಈಗ ಮತ ಯಾವ ಲೆಕ್ಕ ಬಿಡಿ.

ಏನಂದ್ರಿ? ಮತವಾ? ಹ್ಹಿಹ್ಹಿಹ್ಹಿ. ನೀವು ಕಾಶಿಗೆ ಬಂದು ನೋಡಿ– ಮತ ಎಲ್ಲಾ ಗೊತ್ತಾಗುತ್ತೆ. ಮತ–ಗಿತ ಎಲ್ಲಾ ಡಂಬಾಚರ. ನವಾಬ ಸತ್ಯ ಹೇಳ್ತೇನೆ. ಹಗಲು ಮಡಿ, ಮೈಲಿಗೆ, ಸಸ್ಯಾಹಾರ, ಪೂಜೆ ನಾವು ಹೀಗೆ ಆಚಾರ–ವಿಚಾರ ಅನ್ನೋ ಜನರೆಲ್ಲಾ ಆ ದಾರ– ಈ ದಾರ: ಈ ಮಣೆ–ಆಣೆ. ಎಲ್ಲಾ ಮನೆಯ ಗೂಟಕ್ಕೆ ನೇತು ಹಾಕಿ ಹೆಂಡ್ತಿಯರ ಸೀರೆಯನ್ನು ಮುಸುಕು ಹಾಕ್ಕೊಂಡು ಯಾವ ಮಾಂಸ ಅಂತಿಲ್ಲ ಆ ಮಾಂಸ ಮುಕ್ತಾರೆ. ಮೂಳೆ ಕಡೀತಾರೆ. ಸಾಮಾನ್ಯ ಜನ್ರು ಬಿಡಿ. ಹಗಲು ಪರಸ್ತ್ರೀಯರನ್ನು ಮಾತೆಯರಂತೆ ನೋಡಿ ಅಂತ ಹೇಳಿದ ಮಠಾಧೀಶರೇ ಏನೇನು ಮಾಡ್ತಾರೆ ಅಂತ ಕೇಳಿ. ಸುಖ ಇಲ್ಲ. ಅವರಿಗೆ ಮೆರವಣಿಗೆ ಬೇಕು. ಕುದುರೆ ಬೇಕು. ಪಲ್ಲಕ್ಕಿ ಬೇಕು ಚಾಮರ ಬೇಕು. ಗಾಳಿ ಬೀಸಲು ಹೆಂಗಸರ ಸೀರೆಯ ಸೆರಗು ಬೇಕು. ಅಸಹ್ಯ. (ಮೂಗನ್ನು ಅಸಹ್ಯವೆಂಬಂತೆ ಒತ್ತಿ ಹಿಡಿಯುವನು)

ನವಾಬ : ಇದು ನನ್ನ ಮತದ ಸಮಸ್ಯೆ ಅಲ್ಲ.

ಕೇಳುವವರದು. ಹೇಳುವವರದು.

ನಾನು ಹೀಗೆ ಹೇಳ್ತೇನೆ ಅಂತ ಬೇಸರ ಪಡಬೇಡಿ.

ಇದು ಭಾರೀ ಸುಲಭ. ನನ್ನ ಕೆಲವು ಗೆಳೆಯರಿದ್ದಾರೆ. ಮಾತೆತ್ತಿದ್ದರೆ ನಮಗೆ ಮತಾಚಾರ ಇಲ್ಲ ಅನ್ನುವುದು. ಆದರೆ ಮಾಡುವುದು ಅದೇ ಕೆಲಸವನ್ನುಹಾಗೇನಾದರೂ....

ನವಾಬ : ಗಂಭೀರವಾಗಿ ಹೇಳ್ತೀನಿ.

ನಿನ್ನೆ ಕಾಡಿನಲ್ಲಿ ಒಬ್ಬಳು ಹುಡುಗಿಯನ್ನು ಕಂಡೆ.

ಸಖ : ಅಷ್ಟೆಯೋ? ನೀವು ಒಬ್ಬಲು ಹುಡುಗಿಯನ್ನು ನೋಡಿದ್ದಕ್ಕೆ ಆಶ್ಚರ್ಯಪಡ್ತೀರಿ. ನಾನು ಬಿಡಿ. ಹೇಳ್ಬಾರ್ದು –ಆದ್ರೂ ನಿಮ್ಮಲ್ಲಿ ಗುಟ್ಟೇನು ದಿನಾ ಎಷ್ಟೊಂದು ಹುಡುಗಿಯರನ್ನು ನೋಡ್ತೀನಿ–ಬಿಡ್ತೀನೀ. ಅದೂ ಯಾವ್ಯಾವ ಅವತಾರ? (ರಾಗಬದ್ಧವಾಗಿ) "ಎರಡೂ ಕಣ್ಣು ಸಾಲದು ನಿನ್ನ ನೋಡಲು" ನೋಡಿದರೆ ಮೈಯ ನರನಾಡಿಗಲು ಜುಂ ಎನ್ನುತ್ತವೆ.

ನವಾಬ : ಗಂಭೀರ–ಗಂಭೀರ

ಸಖ : ಆಯ್ತು–ಆಯ್ತು ಗಂಭೀರ.

ನವಾಬ : ಆ ಹುಡುಗಿ ಓಡಿ ಬರ್ತಿದ್ದಳು.

ಸಖ : (ನಗುತ್ತಾ ಅಯ್ಯೋ ಅದರಲ್ಲೇನು ವಿಶೇಷ? ಈಗ ಹುಡುಗಿಯರು ಓಡುವುದು ವಿಶೇಷವಲ್ಲ. ನಿಧಾನವಾಗಿ ಬೆಕ್ಕಿನಂತೆ ನಡೆಯುವುದು ವಿಶೇಷ. (ಅಭಿನಯಿಸಿ ತೋರಿಸುತ್ತಾ) ಹಿಂಗೆ ನಡೆದರೆ ಪ್ರಾಶಸ್ತ್ಯ. ಬೆಕ್ಕಿನ ಹಾಗೆ ನಡೆಯಬೇಕು. (ಬಗ್ಗಿ ತನ್ನ ಕೈಗಳನ್ನು ಊರಿ ಅಂಬೆಗಾಲಿಟ್ಟು ನಡೆಯುತ್ತಾ) ಹೀಗೆ ನಡೆಯಬೇಕು ನಿಧಾನವಾಗಿ. ಹಿಂದಿನಿಂದ ಸಂಗೀತವಿರಬೇಕು. ಹುಡುಗಿಯರು ಹಿಂಗೆ ಅಂಬೆಗಾಲಿಟ್ಟು ನಡೆದರೆ ಅದರ ಸೌಂದರ್ಯವೇ ಬೇರೆ. ಅವರು ಹಾಡಬೇಕು "ಬಾ ಬಾರೋ ರಸಿಕನೆ ಬಾರೋ" ಅಂತ. ನಿಮಗೆಲ್ಲಾ ಇದೆಲ್ಲಿ ತಿಳಿಯಬೇಕು.

ನವಾಬ : ಗಂಭೀರ

ಸಖ : ಆಯ್ತು–ಇನ್ನು ಗಂಭೀರ.

ನವಾಬ : ಆತ್ಮಹತ್ಯೆಗೆ ಹೊರಟ ಆ ಹುಡುಗಿಯನ್ನು ತಡೆದು ಕರೆದು ತಂದಿದ್ದೇನೆ.

ಸಖ : ಒಳ್ಳೆಯ ಕೆಲಸ.

ನವಾಬ : ಅವಳು ವೈದಿಕರ ಹುಡುಗಿ.

ಸಖ : ಮತ್ತೂ ಒಳ್ಳೆಯ ಕೆಲಸ ಆ ಹಾಂ ಏನು? ವೈದಿಕರ ಹುಡಿಗಿಯೇ?

ನವಾಬ : ಈಗ ಅವಳನ್ನು ಅಂತಃಪುರದಲ್ಲಿ ಯಾರಿಗೂ ತಿಳಿಯದಂತೆ ರಕ್ಷಣೆ ಒದಗಿಸಬೆಕು. ನಾಡಿಗೆ ತಿಳಿದರೆ ನವಾಬರು ಮತಾಂತರಕ್ಕೆ

ಹೊರಿಟಿದ್ದಾರೆಂದು ಪ್ರಚಾರವಾದೀತು. ಅದರಿಂದ ಕೋಲಾಹಲವಾಗಬಹುದು. ಇದರ ಜವಾಬ್ದಾರಿ ನಿನಗೆ ಕೊಟ್ಟಿದ್ದೇನೆ. ನೋಡಿಕೋ. (ನವಾಬ ತೆರಳುವನು)

ಸಖ : (ಶಾಲನ್ನು ತಲೆಗೆ ರುಮಾಲಿನಂತೆ ಸುತ್ತಿಕೊಂಡು) (ಗಂಭೀರವಾಗಿ) ಏಣಿಯ ಎರಡನೆಯ ಮೆಟ್ಟಿಲು ಏರಲು ಇದು ಸದಾವಕಾಶ. ಬಂದ ಅವಕಾಶವನ್ನು ಕಾಲಲ್ಲಿ ಒದೆಯುವ ಜಾತಿ ನಾನಲ್ಲ. ಏರಿಯೇ ಏರುತ್ತೇನೆ. (ಗಂಭೀರವಾಗಿ ತೆರಳುವನು)



# ದೃಶ್ಯ 9

(ಬೇಗಂ ಮತ್ತು ಸಖ)

ಸಖ : ಹೆಚ್ಚು ಮಾತಿಗೆ ಅವಕಾಶವಿಲ್ಲ. ನವಾಬರು ನಿಮ್ಮನ್ನು ಯಾಕೆ ನಿರ್ಲಕ್ಷಿಸುತ್ತಿದ್ದಾರೆ ಎಂಬುದಕ್ಕೆ ನಾನು ಸಾಕ್ಷಿ ಕೊಡುತ್ತೇನೆ.

ಬೇಗಂ : ಏನದು?

ಸಖ : ನಿಮಗಿಂತ ಸಣ್ಣ ವಯಸ್ಸಿನ ಹುಡುಗಿಯೊಬ್ಬಳು ನವಾಬರಿಗೆ ಸಿಕ್ಕಿದ್ದಾಳೆ. ಇನ್ನು ನೀವು ಯಾಕೆ? ಅವರಿಬ್ಬರ ಅವತಾರಗಳನ್ನು ನೋಡಿ. ಅಷ್ಟೆ. ನಾನು ಹೆಚ್ಚು ಮಾತಾಡುವುದಿಲ್ಲ. ನನ್ನ ಜೊತೆ ಬನ್ನಿ. ಆದರೆ ಎಲ್ಲೂ ಮಾತಾಡಬೇಡಿ. ಮೌನದಿಂದಿರಿ ಅಷ್ಟೆ.

(ಇಬ್ಬರೂ ತೆರಳುವರು) (ಕತ್ತಲೆ-ಬೆಳಕು) (ರಂಗದ ಇಬ್ಬಾಗದಲ್ಲಿ ಕ್ರಿಯೆಗಳು ನಡೆಯುತ್ತವೆ. ನವಾಬ ಮತ್ತು ಗೌರಿ ಏಕಾಂತದಲ್ಲಿದ್ದಾರೆ)

ನವಾಬ : (ಪ್ರೀತಿಯಿಂದ) ಗೌರಿ, ಗೌರಿ. ಯಾಕಮ್ಮ?

(ಗೌರಿ ಕುಳಿತಿದ್ದವಳು ಗಾಬರಿಯಿಂದ ಎದ್ದು ನಿಲ್ಲುತ್ತಾಳೆ) ಯಾಕಮ್ಮಾ ಅಷ್ಟೊಂದು ಗಾಬರಿ.

ಗೌರಿ : ಇಲ್ಲ. ನೀವು ಬಂದಿದ್ದು ಗೊತ್ತಾಗಲಿಲ್ಲ. ನೀವು ಹಿರಿಯರು. ಹಿರಿಯರು ಬರುವಾಗ ಎದ್ದು ನಿಲ್ಲಬೇಕು. (ಅವನ ಕಾಲಿಗೆ ನಮಸ್ಕರಿಸುತ್ತಾಳೆ)

ನವಾಬ : ಗೌರಿ-ಇದೆಲ್ಲಾ ಬೇಡಮ್ಮ.

ಗೌರಿ : ಇಲ್ಲ, ನೀವು ಕಾಪಾಡಿದಿರಿ.

ನವಾಬ : ಕಾಪಾಡುವ ಪ್ರಶ್ನೆ ಎಲ್ಲಿ ಬಂತು? ನಿನ್ನ ಜೀವ ಉಳಿಸಿದ್ದೇನೆ ಎನ್ನುವುದಕ್ಕಿಂತ ಈ ದೊಡ್ಡ ಅರಮನೆಯಲ್ಲಿ ನನ್ನ ಪುಟ್ಟ ಗೌರಿ ಇದ್ದಾಳೆ ಅನ್ನುವುದು ಒಂದು ಸಂತೋಷ. ಒಂದು ಜೀವಿ ಇನ್ನೊಂದು ಜೀವಿ ಹತ್ತಿರ ನಿಷ್ಕಂಳಂಕವಾಗಿ ಯಾವುದನ್ನೂ ಬೇಡದೆ ಇದ್ದರೆ, ಪರಸ್ಪರ ಆತ್ಮಸಂವಾದ ನಡೆಸಿದರೆ, ಅದಕ್ಕಿಂತ ದೊಡ್ಡದು ಯಾವುದಿದೆ ಹೇಳು? ಇಡೀ ಜೀವನ ಹುಡುಕುತ್ತಿದ್ದೇನೆ. ಇದಕ್ಕಾಗಿ. ಈ ಸತ್ಯಕ್ಕಾಗಿ. ನಿಸ್ವಾರ್ಥ ಪ್ರೀತಿಗಾಗಿ.

ಗೌರಿ : ನನಗೆ ಇದೆಲ್ಲಾ ಅರ್ಥವಾಗುವುದಿಲ್ಲ.

ನವಾಬ : ನಿನಗೆ ಅರ್ಥವಾಗುವ ವಯಸ್ಸೂ ಅಲ್ಲ.

ಗೌರಿ : ಆದರೂ ಬಿಡಿಸಿ ಹೇಳಿ.

ನವಾಬ : ಇಲ್ಲಿ ಬಾ.

(ಗೌರಿ ಹತ್ತಿರ ಬರುವಳು)

ನವಾಬ : ನಿನ್ನ ಕೈಯನ್ನು ಕೊಡು.

(ಗೌರಿ ಕೈಯನ್ನು ಕೊಡುವಳು)

ನವಾಬ : ಅವಳ ಕೈಯನ್ನು ಹಿಡಿದುಕೊಂಡು ತನ್ನ ಹಣೆಗೆ ಮುಟ್ಟಿಸಿಕೊಂಡು ಹೇಳುತ್ತಾನೆ)

ನವಾಬ : ಗೌರಿ, ಪ್ರೀತಿಯೆನ್ನುವುದು ಸ್ಪಟಿಕದಂತೆ ಇರಬೇಕು. ನೋಡು ನಿನ್ನ ಈ ಪುಟ್ಟ ಕೈಗಳು ಈ ನನ್ನ ಮುದಿ ದೇಹವನ್ನು ಎಷ್ಟೊಂದು ರೀತಿಯಿಂದ ಸಮಾಧಾನ ಪಡಿಸುತ್ತದೆ. ಗೆದ್ದಲು ಹಿಡಿದ ಮರ ಚಿಗುರುವುದಿಲ್ಲ ಗೊತ್ತು. ಆದರೂ ನನಗೆ ಪ್ರೀತಿಯ ನಾಕು ಮಾತು ಬೇಕಿದ್ದವು. ಅದಕ್ಕಾಗಿ ಜೀವಮಾನವಡೀ ಹಂಬಲಿಸಿದೆ. ಅಪ್ಪನಿಂದ ಸಿಕ್ಕ ಪ್ರೀತಿ ಮತ್ತೆ ಯಾರ ಬಳಿಯಲ್ಲಿಯೂ ಸಿಗಲಿಲ್ಲ. ಹುಡುಕಿದೆ. (ಅವಳ ಕೈಯನ್ನು ಹಣೆಯಿಂದ ತೆಗೆದು ಕೈಯಷ್ಟೆ ಹಿಡಿದುಕೊಂಡು) ನನ್ನ ಹಿಂದೆ ಜನ ನನ್ನ ಅಧಿಕಾರ ಕಿತ್ತುಕೊಳ್ಳಲು ಹದ್ದು ಡೇಗೆಗಳಂತೆ ಕಾಯುತ್ತಿದ್ದಾರೆ. ನನ್ನ ಸಂಪತ್ತಿಗೆ, ನನ್ನ ಹಣಕ್ಕೆ. ನನ್ನನ್ನ ಕಿತ್ತು ಕಿತ್ತು ತಿನ್ನುತ್ತಿದ್ದಾರೆ. ಅದರ ನೋವು ಆ ಯಾತನೆ ನಿನಗೆ ಅರ್ಥವಾಗಲಾರದು. (ಅಲ್ಲಿಂಯೇ ಮಂಡಿಯೂರಿ ಕುಳಿತುಕೊಳ್ಳುವನು) ನಾನು ತಡೆಯಲಾರೆ. ನನಗಿನ್ನು ತಡೆದುಕೊಳ್ಳುವ ಶಕ್ತಿಯಂತೂ ಇಲ್ಲ.

(ಗೌರಿಯೂ ಮಂಡಿಯೂರಿ ಕುಳಿತ ನವಾಬನ ಹೆಗಲಿನ ಮೇಲೆ ಕೈಯಿಟ್ಟು)

ಗೌರಿ : ನಿಮಗೆ ಯಾಕೆ ಬೇಸರನೋ ನನಗೆ ಅರ್ಥವಾಗುವುದಿಲ್ಲ.

ನವಾಬ : ಶ್ರೀಮಂತಿಕೆಯಿಂದ; ಬೇಕಾದ್ದನ್ನು ಕೊಂಡುಕೊಂಡರೆ ಸುಖ ಸಿಗುತ್ತೆ ಅಂತ ಕೆಲವರು ಭಾವಿಸ್ತಾರೆ. ಅಧಿಕಾರವಿಲ್ಲದಿದ್ದರೆ ಹುಚ್ಚು ನಾಯಿ ಕಡಿದ ಹಾಗೆ ಆಡ್ತಾರೆ ಜನ. ಜನರು ಸ್ವಾರ್ಥಿಗಳು. ನೀಚರು. ಆದರೆ ಇನ್ನೊಬ್ಬರನ್ನು ನೀಚರೆಂದು ಕರೆಯುವುದರಲ್ಲಿಯೇ ತಮ್ಮ ನಾಯಿ ನಾಲಿಗೆಯ ಚಪಲ ತೀರಿಸಿಕೊಳ್ಳುತ್ತಾರೆ.

ಗೌರಿ : ನೀವು ನವಾಬರು. ನಾಡಿನ ಅಧಿಕಾರವಿದೆ, ಸೈನ್ಯವಿದೆ, ಮಂತ್ರಿಗಳಿದ್ದಾರೆ. ಅಂತಃಪುರದಲ್ಲಿ ನಿಮ್ಮ ಸೇವೆಗಾಗಿ ಬಹಳ ಜನರಿದ್ದಾರೆ.

ನವಾಬ : ಬಾ. ನನ್ನ ಪಕ್ಕ ಕುಳಿತುಕೋ. ನಿನ್ನ ಸ್ಪರ್ಶ ಬೇಕು. ಅದರಲ್ಲಿ ಮಲ್ಲಿಗೆಯ ಪರಿಮಳವಿದೆ. ಕೇದಿಗೆ ಘಾಟು ವಾಸನೆಯಿಲ್ಲ. ಕಟು ವಾಸನೆಯಿಲ್ಲದ ಎಲ್ಲವೂ ನನಗಿಷ್ಟ. ನಾನು ಅವುಗಳನ್ನು ಇಷ್ಟಪಡುತ್ತೇನೆ. ಮಾತಿನಲ್ಲಿ ಮೆಣಸಿನಕಾಯಿಯ ಉರಿಯಿರಬಾರದು. ನೇರ ಮಾತಾಡುತ್ತೇನೆಯೆಂಬ ಅಹಂಕಾರದಲ್ಲಿ ಇನ್ನೊಬ್ಬನ ಹೃದಯವನ್ನು ಉರಿ ಹಾಕಿ ಬೇಯಿಸುವವರಲ್ಲಿ ಸ್ವಯಂ ಆತ್ಮದ ವಿಜೃಂಭಣೆಯಿರುತ್ತದೆ. ಎದುರಿರುವ ಮನುಷ್ಯ ತನಗಿಂತ ಕೀಳು; ಹುಳ; ಕೀಟವೆಂಬ ವಿಕೃತಿಯಿರುತ್ತದೆ. ಬೇಗಂನ ಮಾತುಗಳು ಯಾವಾಗಲೂ ಹೀಗೆಯೇ ಇರುತ್ತದೆ. ನನ್ನ ಹೃದಯ ಸದಾ ಉರಿಯುವ ಬಾಣಲೆಯಂತಿರುತ್ತದೆ. ಗೌರಿ, ಅಧಿಕಾರದ ಕೆಳಗಿನ ಕತ್ತಲು ಮಾತ್ರ ನನಗೆ ತಿಳಿಯುತ್ತದೆ. ಅದಕ್ಕೆ ನನ್ನ ವಯಸ್ಸು ಇಷ್ಟೊಂದು ವರ್ಷ ಮಾಗಬೇಕಾಯಿತು. (ತೋಳುಗಳನ್ನು ಎತ್ತಿ) ಈಗ ಈ ತೋಳಿನಲ್ಲಿ ಶಕ್ತಿಯಿಲ್ಲ. ಕೈ ನಡುಗುತ್ತದೆ.

(ಕೈಯನ್ನು ಮುಂದೆ ಚಾಚಿ) ನನ್ನ ಬೆರಳುಗಳಿಗೆ ಶಕ್ತಿಯಿಲ್ಲ. ಎಣ್ಣೆಯಿಲ್ಲದ ಬತ್ತಿಯಂತೆ ಕರುಕಲಾಗಿದೆ. ಕಾಣಿಸ್ತಿದಿಯೊ?

ಮಧ್ಯರಾತ್ರಿ ಎದ್ದುಕೂತು ಈ ರಾಜ್ಯವನ್ನು ಕಾಪಾಡಲು ಸಮರ್ಥರಿಗಾಗಿ ಮೊರೆಯಿಡುತ್ತೇನೆ.

ಹೃದಯದ ಭಾಷೆ ಅರ್ಥವಾಗುವವರು ಈ ನಾಡಿನಲ್ಲಿ ಯಾರೂ ಇಲ್ಲ. ಅದು ಗೊತ್ತೆ?

ಗೌರಿ : ನಾನು ನಿಮ್ಮಷ್ಟು ತಿಳಿದವಳಲ್ಲ. ಆದರೂ ನನಗೆನ್ನಿಸುತ್ತದೆ, ನಾವೆಲ್ಲ ಸಮುದ್ರದಲ್ಲಿ ಹೊರಟ ಕಾಗದದ ದೋಣಿಗಳು ಅಂತ. ಮಳೆಗಾಲದಲ್ಲಿ ಮನೆಯ ಮುಂದೆ ನೀರು ಬೀಳುತ್ತಿದ್ದಾಗ ಕಾಗದದ ದೋಣಿ ಮಾಡಿ ಬಿಡುತ್ತಿದ್ದೆ. ಅವು ಮುಳುಗುತ್ತಿದ್ದವು. ಬೇಜಾರಾಗುತ್ತಿತ್ತು.

ನವಾಬ : ಜೀವನವೇ ಹೀಗೆ.

ಗೌರಿ : (ನವಾಬನ ಕೈ ಹಿಡಿದುಕೊಂಡು) ನನಗೆ ಈಗ ಅಪ್ಪ-ಅಮ್ಮನ ಬಿಟ್ಟು ಬಂದಿದ್ದು ತಪ್ಪು ಅನಿಸುತ್ತೆ. ಓಡಿ ಬರಬಾರದಿತ್ತು. ಇಲ್ಲಿ ಯಾರೂ ಇಲ್ಲ.

ಸದಾ ಸೈನಿಕರು. ಅವರ ಕೈಯಲ್ಲಿ ಒಂದಲ್ಲ ಒಂದು ಆಯುಧಗಳು. ಮಾತು-ಕತೆಯಿಲ್ಲ. ಯಾವಾಗ ನೋಡಿದರೂ ಹುಬ್ಬು ಗಂಟಿಕ್ಕಿಕೊಂಡಿರುತ್ತಾರೆ. ಅವರನ್ನು ನೋಡಿದರೆ ಮನುಷ್ಯರು ಅಂತಲೇ ಅನ್ಸೋಲ್ಲ.

ನವಾಬ : (ನಗುತ್ತಾ) ನೀನು ಓಡಿ ಬಂದಿದ್ದು ತಪ್ಪು, ಮಾಡಬಾರದಿತ್ತು. ಏನು ಮಾಡಬಹುದಿತ್ತು ಗೊತ್ತಾ? ಸದಾ ಎಡಗೈಯ ಸಿಂಬಳವನ್ನು ತೆಗೆಯುತ್ತಾ ತನ್ನ ಹೆಗಲ ಶಾಲಿನಲ್ಲಿ ಒರಸುತ್ತಾ, ಕಂಕುಳನ್ನು ಒರೆಸಿಕೊಂಡು ಅದನ್ನೇ ಮೂಸುವ ಕಡವೆ ಜೋಯಿಸರನ್ನು ಮದುವೆಯಾಗಿ ತಿಂಗಳಾನುಗಟ್ಟಲೆ ಒಗೆಯದ ಅವರ ಮಡಿಬಟ್ಟೆಯ ಕಮಟು ವಾಸನೆಯನ್ನು ಅನುಭವಿಸುತ್ತಾ ಸುಖವಾಗಿರಬಹುದಿತ್ತು. ಯಾವ ದುಃಖವೂ ಇಲ್ಲದೆ ಅಲ್ಲವೆ?

ಗೌರಿ : ! ಗಲೀಜು. ನಂಗೆ ಅಸಹ್ಯವೆನಿಸುತ್ತದೆ. ಜಾತಿಯವರಾದರೇನು- ಅವರನ್ನು ನೆನಪಿಸಿಕೊಂಡರೆ ವಾಂತಿ ಬಂದಂತಾಗುತ್ತದೆ.

ನವಾಬ : (ತನ್ನ ಹೆಗಲ ವಸ್ತ್ರ ಹಿಡಿದು) ಇದಕ್ಕೆ ವಾಂತಿ ಮಾಡು.

ಗೌರಿ : ವಾಂತಿ ಮಾಡಿದರೆ ಗಲೀಜು.

ನವಾಬ : ಅದು ಭಾವನೆಗೆ ಸಂಬಂಧಿಸಿದ್ದು. ಪ್ರೀತಿ ಪಾತ್ರರು ಎಷ್ಟೇ ಗಲೀಜು ಇದ್ದರು ಅಸಹ್ಯವೆಂದು ಅನಿಸುವುದಿಲ್ಲ. ತಪ್ಪು ತಿಳಿದುಕೊಳ್ಳಬೇಡ ನಿನ್ನ ಒಂಟಿತನಕ್ಕೆ ಹಕೀಮರೂ ಕೊಡದಿರುವ ಔಷಧಿ ನನ್ನಲ್ಲಿದೆ.

ಕೊಡುತ್ತೇನೆ. ಅದರಿಂದ ನಿನ್ನ ದುಃಖ ಮರೆಯಾಗುತ್ತದೆ. ತಪ್ಪು-ಸರಿಯೆಂಬ ಪಾಪ ಪ್ರಜ್ಞೆಯಿಂದ ನರಳಬೇಡ. ಅದು ನಮ್ಮನ್ನು ಜೀವ ಇರುವ ತನಕ ಹಿಂಡುತ್ತದೆ. ನೀನು ಓಡಿ ಬಂದಿದ್ದು ತಪ್ಪು ಎನ್ನುವುದಾದರೆ-ನಿನ್ನನ್ನು ಓಡಿ ಬರುವ ಹಾಗೆ ಮಾಡಿದ ನಿನ್ನ ಅಪ್ಪ-ಅಮ್ಮ, ಆ ಕಮಟು ಜೋಯಿಸ, ಇವರ್‍ಯಾರು ತಪ್ಪು ಮಾಡಿಲ್ಲ ಅಂತ ಆಗುವುದಿಲ್ಲವೆ? ಅದನ್ನು ಒಪ್ಪುತ್ತೀಯೊ?

ಗೌರಿ : ನಂಗದು ಗೊತ್ತಾಗೋಲ್ಲ.

ನವಾಬ : ಬಾ ಇಲ್ಲಿಗೆ, ಬಾ. ನಿರಾತಂಕವಾಗಿ ನನ್ನ ಕಾಲಲ್ಲಿ ಮಲಗು. ನೆಟ್ಟಗೆ-ನಿಶ್ಚಿಂತೆಯಿಂದಿರು. ಅದು ಸುಖ. ಬೇರೆ ಯಾವ ಚಿಂತೆಯೂ ಬೇಡ. (ಕೈ ಹಿಡಿದು ಮಲಗಿಸುವನು)

(ಗೌರಿಯು ನವಾಬನ ತೊಡೆಯ ಮೇಲೆ ಮಲಗುವಳು) (ಅಷ್ಟನ್ನೂ ಮರೆಯಿಂದ ಬೇಗಂ ಮತ್ತು ಸಖ ವೀಕ್ಷಿಸುವರು)

ಗೌರಿ : (ನವಾಬನ ಗಡ್ಡಮುಟ್ಟಿ) ನಿಮ್ಮ ಬಿಳಿಗಡ್ಡ ನಿಮಗೆ ತುಂಬಾ ಚೆನ್ನಾಗಿ ಒಪ್ಪುತ್ತದೆ.

ನವಾಬ : (ನಗುತ್ತಾ) ಗಡ್ಡ ಮೀಸೆ ಎರಡು ಬಿಳಿಯಾಗಿದೆ. ನಿನ್ನ ತಲೆಗೂದಲು ಬಿಳಿಯಾಗೋಕೆ ಮಾತ್ರ ನೀನು ತುಂಬಾ ವರ್ಷ ಕಾಯಬೇಕು. ಬಿಳಿ ಗಡ್ಡ ವಯಸ್ಸಿನ ಸಂಕೇತ. ಮನಸ್ಸಿನ ಸಂಕೇತ ಅಲ್ಲ.

ಗೌರಿ : ನಾನು ಗಂಡಸಾಗಿದ್ರೆ....

ನವಾಬ : ಆಗಿದ್ರೆ ಮೀಸೆ ಬರ್ತ್ತಿತ್ತು. ದೇಶ ಕಾಣ್ತಿರಲಿಲ್ಲ. ಈಗಲು ಅಷ್ಟೆ-ದೇಶ ಕಾಣ್ತೋ-ಇಲ್ವೋ ಗೊತ್ತಿಲ್ಲ.

ಗೌರಿ : ಹೀಗೆಲ್ಲಾ ಮಾತಾಡ್ಬೇಡಿ. ನಾಚಿಕೆಯಾಗುತ್ತೆ.

ನವಾಬ : ನಾಚಿಕೆ ಒಳ್ಳೆಯ ಲಕ್ಷಣ.

ಗೌರಿ : ಹೋಗ್ಲಿ ಬಿಡಿ. ನಿಮ್ಮನ್ನು ಕಂಡ್ರೆ ಖುಷಿಯಾಗುತ್ತೆ. ನೀವು ಗಡ್ಡ ಬೋಳಿಸಿದ್ರೆ ಹೇಗಿರುತ್ತೆ?

ನವಾಬ : ಗಡ್ಡ ಬೋಳಿಸಿದ್ರೆ ಗಲ್ಲ ಒಳಗೆ ಹೋಗಿ ಗವಿಯಾದ್ದು ಕಾಣಿಸುತ್ತೆ ಅಷ್ಟೆ.

ಗೌರಿ : ಎಲ್ಲಿ? ನೀವು ನನ್ನ ಬೆನ್ನು ತಟ್ಟಿ. ನಾನು ನಿಮ್ಮ ತೊಡೆಯಲ್ಲಿ ಮಲಗಿ ನಿದ್ದೆ ಮಾಡ್ತಾ, ಮಾಡ್ತಾ ಕನಸು ಕಾಣ್ತೇನಿ. ಅದರಲ್ಲಿ

ನಕ್ಷತ್ರ ಇರುತ್ತೆ, ನೀವಿರ್‍ತೀರಿ, ಚಂದ್ರ ಇರ್‍ತಾನೆ. ಹೂಗಳ ರಾಶಿ ರಾಶಿ ಇರುತ್ತೆ. ಸಂಗೀತ ಇರುತ್ತೆ, ದುಃಖಾನೇ ಇರೋಲ್ಲ. ಯಾರೂ ಇರೋಲ್ಲ. ಖುಶಿಯಿಂದ ಕಾಗದದ ದೋಣಿ ಮಾಡಿ ನೀರಲ್ಲಿ ಬಿಡ್ತೀನಿ. ಅದು ಮುಳುಗುವುದೇ ಇಲ್ಲ.

(ನವಾಬ ಅವಳ ಬೆನ್ನು ತಟ್ಟುತ್ತಾ ಇರ್‍ತಾನೆ)

ಬೇಗಂ : (ಸಖಿಯೊಂದಿಗೆ) ನೋಡ್ದಿಯೊ?

ಸಖಿ : (ತುಟಿಯ ಮೇಲೆ ಬೆರಳಿರಿಸಿ) ಮೌನ.

ಬೇಗಂ : ಈ ಮುದುಕನಿಗೆ ಚಪಲ ತೀರಿಲ್ಲ.

ಸಖಿ : (ಹಂಗಿಸುವ ಧ್ವನಿಯಲ್ಲಿ) ಈಗ ಗೊತ್ತಾಯ್ತೊ, ವಿಷಯ ಏನೂಂತ? ನಿಮ್ಮನ್ನು ನವಾಬರು ಕಸಪೊರಕೆ ಮಾಡಿದ್ದಾರೆ ಅಂತ.

ಬೇಗಂ : ಉರಿ ಹಚ್ಚಬೇಡ. ಇಬ್ಬರನ್ನು ಕಡಿದು ಕೊಲ್ಲಬೇಕೆಂದು ಅನಿಸುತ್ತದೆ.

ಸಖಿ : ದುಡುಕಬೇಡಿ.

ಬೇಗಂ : ಆ ಹುಡುಗಿಯ ಕಪಾಳಕ್ಕೆ ಎರಡು ಬಿಗಿಯುತ್ತೇನೆ.

ಸಖಿ : ಅದು ಸರಿಯಾದ ದಾರಿಯಲ್ಲ!
ನಿಮ್ಮ ಗುರಿಯೂ ಅದಲ್ಲ-ನವಾಬರ ಆತ್ಮನಾಶ-ನೆನಪಿರಲಿ.
ಅದು ನಾಶವಾದರೆ ಅವರ ರೆಕ್ಕೆ ಕತ್ತರಿಸಿದಂತೆ. ತಲೆ ಎತ್ತಿ ಹಾದಿಯಲ್ಲಿ ನಡೆಯಲಾರ.

ಬೇಗಂ : ಏನು ಮಾಡಬೇಕು?

ಸಖಿ : ಅದರ ತಂತ್ರ ನನಗಿರಲಿ. ಬನ್ನಿ.

(ಕತ್ತಲೆ)



# ದೃಶ್ಯ 10

ಸಖಿ : (ತಲೆಯ ರುಮಾಲು ಸುತ್ತಿಕೊಂಡು, ಕೊರಳಿಗೆ ಮುತ್ತಿನ ಹಾರ ಹಾಕಿಕೊಂಡು ಬರುತ್ತಾನೆ)

ಏಣಿಯ ಮೆಟ್ಟಲಿನ ತುದಿಯೇರಲು ಇನ್ನು ಕೆಲವು ದಿನಗಳು ಉಳಿದಿವೆ. ಈಗ ರಾಜಯೋಗದ ಕ್ಷಣಗಳು ಹತ್ತಿರ ಬಂದವು. ಕಾಯುವುದು ನನಗೆ ಬೇಸರವಿಲ್ಲ. ಉರಿ ಹಚ್ಚುವವನಿಗೆ ಗೊತ್ತಿರಬೇಕಾದ ಒಂದು ಎಚ್ಚರವೆಂದರೆ, ಹೊಗೆಯು ಕಣ್ಣನ್ನು ಆವರಿಸದಂತೆ ಎಚ್ಚರವಹಿಸಬೇಕೆಂಬುದು. ಅದು ಮಾತ್ರ ನನ್ನ ಗುರಿ. ಗುರಿಯನ್ನು ತಲುಪುವವನಿಗೆ ಉಳಿದುದು ಯಾವ ಲೆಕ್ಕ? (ನಗುತ್ತಾನೆ. ಸಣ್ಣನೆಯ ನಗು ಮತ್ತೆ ಮತ್ತೆ ದೊಡ್ಡದಾಗುತ್ತಾ ಹೋಗುತ್ತದೆ)

(ದಾಪುಗಾಲಿಟ್ಟುಕೊಂಡು ಹೋಗುತ್ತಾ)–

ಒಂದರ ನಾಶ ಮತ್ತೊಂದರ ಹುಟ್ಟು – ಇದು ಈ ಪಂಡಿತನ ತರ್ಕ. ಇದರ ಒಳಗುಟ್ಟು; ಇದರ ಒಳಸುಳಿಯನ್ನು ನಾನಲ್ಲದೆ ಈ ಜಗತ್ತಿನಲ್ಲಿ ಯಾರೂ ಅರ್ಥ ಮಾಡಿಕೊಳ್ಳುವುದಿಲ್ಲ.

**(ಕತ್ತಲೆ–ಬೆಳಕು)**

ಬೇಗಂ : (ಸಖಿನು ಯಾವ ರೀತಿಯಲ್ಲಿ ಹೆಜ್ಜೆಯಿಟ್ಟು ಒಳ ಹೋದನೋ ಅದೇ ರೀತಿ ಬೇಗಂ ಅದೇ ಆ ವೇಶದಲ್ಲಿ ಬರುವಳು)

ಈ ಮುಡಿಡೇಗೆ ನನ್ನ ಕರುಳಿಗೆ ಕುಕ್ಕಿದೆ. ಬಿಡುತ್ತೇನೆ ಅಂತ ಭಾವಿಸಿದ್ದಾನೆ. ಅವನ ಹುಚ್ಚು; ಅವನ ಭ್ರಮೆ; ಅವನು

ವಿಕ್ಷಿಪ್ತತೆಯನ್ನು ಜೀವನದಲ್ಲಿ ಸಹಿಸಿದೆ. ಒಂದೇ ಒಂದು ಕಾರಣಕ್ಕೆ, ಅವನ ಹೆಂಡತಿಯಾಗಿದ್ದೇನೆ ಎಂಬ ಸಣ್ಣ ಕಾರಣಕ್ಕೆ. ಅವನೊಬ್ಬ ಹುಚ್ಚ; ಜೊಳ್ಳು; ಗೆದ್ದಲು ಹಿಡಿದ ಮರ. ಅದರಷ್ಟಕ್ಕೆ ಬಿದ್ದು ಹೋಗುತ್ತದೆ. ಬಿದ್ದು ಹೋದ ಮೇಲೆ ನೋಡಿಕೊಂಡರಾಯಿತು ಎಂದು ಭಾವಿಸಿಕೊಂಡೆ. ಅವನು ಅಂದು ಹೇಳಿದ ಒಂದೊಂದು ಮಾತುಗಳು ಕೂಡಾ ನನ್ನ ಜೀವನಕ್ಕೆ ಮರ್ಮಾಘಾತವಾಗಿದ್ದವು. ಆದರೂ ತಡೆದೆ. ಈಗ ನೋಡಿದರೆ, ನನ್ನ ಕಣ್ಣೆದುರಿನಲ್ಲಿ ಈ ನವಾಬ ಮತ್ತೆ ಅಧಿಕಾರ ಸೂತ್ರ ಗಟ್ಟಿಯಾಗಿ ಹಿಡಿದುಕೊಂಡು, ನನ್ನನ್ನು ಮೂಲೆಗೆ ತಳ್ಳುವ ಹುನ್ನಾರ ನಡೆಸುತ್ತಿದ್ದಾನೆ. ಈ ಕಾಶಿ ಪಂಡಿತ ಬೇರೆ-ಬದನೆಕಾಯಿ ತಿನ್ನೋಕೆ ಹೋಗಿದ್ದಾನೆ. ಏನು ಮಾಡಬಹುದು? (ಅತ್ತಿಂದಿತ್ತ ಹೋಗುತ್ತಾಳೆ) (ಸಖಿ ಬರುತ್ತಾಳೆ)

ಸಖಿ : ಏನ್ರವ್ವ?

ಬೇಗಂ : ಹೋಗೆ-ಕಳ್ಳ ಬೆಕ್ಕೆ.
ನನ್ನ ತಲೆ ಬಿಸಿ ನನಗೆ.

ಸಖಿ : ತಲೆಯಿರುವವರಿಗೆ ತಲೆ ಬಿಸಿ ಬರುತ್ತೆ.
ನಂಗೆ ತಲೆಯಿಲ್ಲ ಅಂತಾರೆ. ಅದಕ್ಕೆ ತಲೆ ಬಿಸಿ ಇಲ್ಲ. ನಮ್ಮಂಥವರು ತುಂಬಾ ಜನ ಇರ್ತೀವಿ. ಆರಾಮಾಗಿ ಎಲೆಯಡಿಕೆ ಹಾಕ್ತೀವಿ. ಸಿಕ್ಕಿದ್ದನ್ನ ತಿಂತೀವಿ. ಬೇಕಾದ್ದನ್ನ ಕುಡಿತೀವಿ. ಬೇಕಾದ ಹಾಂಗೆ ಮಲಗ್ತೀವಿ. ನಿದ್ದೆ ಮಾಡ್ತೀವಿ. ನಮ್ಗೆ ತಲೆ ಇರೋದೆ ಗೊತ್ತಾಗೋಲ್ಲ. ಅದನ್ನು ನಿಮ್ಮಂಥವರು ಲೆಕ್ಕಕ್ಕೆ ಇಡ್ಕೊಳ್ಳಲ್ಲ.

ಬೇಗಂ : ರೋಸಿ ಹೋಗಿದೆ.

ಸಖಿ : ಎಲೆಯಡಿಕೆ ಹಾಕ್ಕೊಳ್ಳಿ.

ಬೇಗಂ : ನಿಂಗೆ ಗೊತ್ತಾಗೋಲ್ಲ.

ಸಖಿ : ನಂಗೆ ಗೊತ್ತಾಗೊಲ್ಲ. ಗೊತ್ತಾಗುವ ನಿಮಗೆ....

ಬೇಗಂ : ಯಾವುದು ಬೇಡ. ಆ ನವಾಬನ ಸಖನನ್ನು ಅವಸರದಲ್ಲಿ ಬರ ಹೇಳು ಅಷ್ಟೆ! ಅವನೀಗ ಬೇಕು.

ಸಖಿ : ಅವರೇ ಕಣ್ರವ್ವ ಕಳಿಸಿದ್ದು.

ಬೇಗಂ : ಮತ್ಯಾಕೆ ಸುಮ್ಮನಿದ್ದೆ.

ಸಖಿ : ನೀವು ಬೈದಿರಿ. ಸುಮ್ಮನಿದ್ದೆ.

ಬೇಗಂ : ಏನು ಹೇಳಿದೆ.

ಸಖಿ : ಈ ಓಲೆಯನ್ನು ಕಳಿಸಿದ್ದಾರೆ.

ಬೇಗಂ : ಸರಿ ಹೋಗು. ನೋಡುತ್ತೇನೆ.

(ಸಖಿ ಹೋದ ಮೇಲೆ ಓದ ತೊಡಗುತ್ತಾಳೆ)

ಸ್ವಸ್ತಿಶ್ರೀ

ಶುಭ ಕಾಮನೆಗಳು. ಈಗ ನಾನು ನಿಮ್ಮನ್ನು ಅಧಿಕಾರದಲ್ಲಿ ಎಷ್ಟು ಬೇಗ ಕುಳ್ಳಿರಿಸುವೆನೋ ಎಂಬ ಹಂಬಲದಲ್ಲಿದ್ದೇನೆ. ಅದಕ್ಕಾಗಿ ವೇಷ ಪಲ್ಲಟ ಮಾಡಿ ನಿಮ್ಮ ಸೇವೆಗಾಗಿ ಹೊರಟಿದ್ದೇನೆ. ಅದೇನು ಎಂದು ವಿಚಾರಿಸದಿರಿ. ಕಾಶಿ ಪಂಡಿತನ ತಲೆ ಸಾಮಾನ್ಯವಲ್ಲ ಎಂಬುದು ತಮಗೆ ತಿಳಿದಿದೆ. ಈಗ ತಾವು ಮಾಡಬೇಕಾದುದು ಇಷ್ಟೆ ಹಿಂದೂ ಹುಡುಗಿಯೊಬ್ಬಳನ್ನು ನವಾಬ ಮತಾಂತರಗೊಳಿಸಿ ಮದುವೆಯಾಗಿ ದ್ದಾನೆಂದು ಎಲ್ಲಾ ಮಠಗಳಿಗೂ ಪತ್ರ ಬರೆಯಿಸಿ. ದೇವಸ್ಥಾನ ಒಡೆಸಿದ್ದಾನೆ ಎಂದು ಕೂಡಾ. ಆದರೆ ಎಲ್ಲಿಯೂ ತಮ್ಮ ಹೆಸರು ಬಾರದಿರಲಿ. ಮಂತ್ರಿ ಮತ್ತು ಸೇನಾಧಿಪತಿಯ ಹೆಸರು ಹಾಕಿ ಕಳಿಸಿ. ರಾಜಬೀದಿಯಲ್ಲಿ ಡಂಗುರ ಸಾರುವಂತೆ ಮಾಡಿ. ಡಂಗುರ ಸಾರುವವರಿಗೆ ಹೆಚ್ಚು ಹಣ ಕೊಡಿ ಅಸ್ಪೃಶ್ಯ ಮತ್ತು ದಲಿತರ ಕೇರಿಯಲ್ಲಿಯೂ ಈ ಸುದ್ದಿಯು ಬರುವಂತೆ ನಿಮ್ಮ ಸೇವಕರಿಂದ ವಿಷಯ ತಿಳಿಯಲಿ. ನಾನು ಗುಟ್ಟಾಗಿ ಭೇಟಿಯಾಗುವೆ. ಓದಿದ ತಕ್ಷಣ ಇದನ್ನು ಸುಟ್ಟು ಬಿಸುಡುವುದು."

ನವಾಬ : ಏನದು ಸುಟ್ಟ ವಾಸನೆ?

ಬೇಗಂ : (ನಗುತ್ತಾ) ವಾಸನೆ. ಅದಕ್ಕೆ ಸುಟ್ಟೆ. ಕೂತಿರಿ, ಹಾಲು ಹಣ್ಣು ತರುತ್ತೇನೆ.

ನವಾಬ : ಸುಟ್ಟು ಹೋದ ವಾಸನೆಯನ್ನು ಸಹಿಸುವುದು ತುಂಬಾ ಕಷ್ಟ.

(ಬೇಗಂ ಒಳ ಹೋಗಿ ಬರುತ್ತಾ)

ಬೇಗಂ : ಹೌದು. ನಿಜ. ಆದರೂ ಸಹಿಸಬೇಕು.

ನವಾಬ : ಜೀವನದಲ್ಲಿ ಸಹಿಸುವುದನ್ನು ಎಲ್ಲರೂ ಅಭ್ಯಾಸ ಮಾಡಿಕೊಳ್ಳಬೇಕಲ್ಲವೆ?

ಬೇಗಂ : (ನಗುತ್ತಾ) ನಿಜ. ನಿಜ.

ನವಾಬ : (ಸ್ವಗತ) ಯಾವತ್ತೂ, ಯಾವ ಮಾತನ್ನೂ ಒಪ್ಪದಿರುವವಳು ಈವತ್ತು ಒಪ್ಪುತ್ತಿರುವುದು ಆಶ್ಚರ್ಯವೆನಿಸುತ್ತಿದೆ.

ಬೇಗಂ : (ಸ್ವಗತ) ಇವರಿಗೆ ಹಾಲಿನಲ್ಲಿ ವಿಷ ಬೆರೆಸಿದ್ದರೆ ಏನೂ ಆಗುತ್ತಿರಲಿಲ್ಲ. ಆದರೆ ಇವರ ಸಾವಿನ ಹೊಣೆಗಾರಿಕೆ ನನ್ನ ಮೇಲೆ ಬೀಳಬಾರದು. ಅದು ಸಾರ್ವಜನಿಕರ ಮೇಲಿರಲಿ. ಆಗ ಅದು ಅರ್ಥಪೂರ್ಣವಾಗುತ್ತದೆ.

ನವಾಬ : ಒಂದೆರಡು ದಿನ ವಿಶ್ರಾಂತಿ ತೆಗೆದುಕೊಳ್ಳಲು ಬಂದಿದ್ದೇನೆ. ಆಸ್ಥಾನದ ಯಾವ ಕೆಲಸವನ್ನು ಮಾಡುವುದಿಲ್ಲ. ವಿಶ್ರಾಂತಿ ಕೊಠಡಿಯಲ್ಲಿರುತ್ತೇನೆ. ಅಗತ್ಯವಿದ್ದರೆ ಮಾತ್ರ ಯಾರಾದರೂ ಬಂದು ನನ್ನ ಕರೆಯಲಿ.

ಬೇಗಂ : ನಿಜವಾಗಿಯೂ ನಿಮಗೆ ತುಂಬಾ ವಿಶ್ರಾಂತಿಯ ಅಗತ್ಯವಿದೆ. ವಿಶ್ರಮಿಸಿ (ಕಿರು ನಗೆಯಲ್ಲಿ) ಎಲ್ಲಾ ನಾನು ನೋಡಿಕೊಳ್ಳುತ್ತೇನೆ.

(ನವಾಬ ತೆರಳುತ್ತಾನೆ)

ನೋಡಿಕೊಳ್ಳುವುದಿನ್ನು ನನ್ನ ಕೆಲಸ.

* * *

ಸಖಿ : (ಏಕಾಂತದಲ್ಲಿದ್ದಾನೆ)

ತೋಳ ಹಳ್ಳಕ್ಕೆ ಬಿದ್ದಾಗ ಆಳಿಗೆ ಕಲ್ಲು ಹುಡುಕುವ ಕೆಲಸ. ಅದೇ ಕೆಲಸ ಮಾಡುತ್ತಿದ್ದೇನೆ. ಅದೂ ಸಾಧಾರಣ ತಪ್ಪಲ್ಲ. ದೊಡ್ಡ ದೊಡ್ಡ ಬಂಡೆಗಳು ಉರುಳಿ ಬೀಳಬೇಕು. ಬಿದ್ದರೆ ಇಡೀ ಸಾಮ್ರಾಜ್ಯದ ಆಡಳಿತ ಕುಸಿಯಬೇಕು. ಕಾಶೀಪಂಡಿತನ ತಲೆಯೇನು ಎಂದು ಜಗತ್ತಿಗೆ ತಿಳಿಯುತ್ತದೆ ಆಗ. ಹೇಗೂ ಬರಗಾಲ. ಖಜಾನೆ ಖಾಲಿಯಾಗಿದೆ. ನವಾಬ ಖಿನ್ನನಾಗಿದ್ದಾನೆ. ಎಲ್ಲಾ ಸನ್ನಿವೇಶಗಳು ನನಗೆ ಪೂರಕವಾಗಿಯೇ ಇದೆ. ಮುಖಕ್ಕೆ ಬಣ್ಣ ಬಳಿಯುವುದೂ ಗೊತ್ತು, ಅದನ್ನು ತೆಗೆಯುವುದೂ ಗೊತ್ತು. ಬಣ್ಣ ತೆಗೆದರೆ ಅದರ ವಾಸನೆಯನ್ನು ಯಾರೂ ಹಿಡಿಯಲಾರರು. ಎಲ್ಲಕ್ಕಿಂತ ಬಣ್ಣದ ವಾಸನೆ ಹಿಡಿದವನಿಗೆ; ಎಣ್ಣೆಂಪು ಜಿಡ್ಡು ಕೈಯಲ್ಲಿ ಅಂಟಿಸಿಕೊಂಡವನಿಗೆ ಅದರ ಹುಚ್ಚಿನಿಂದ ಬಿಡಿಸಿಕೊಳ್ಳಲಾರ.

ನವಾಬನ ಪೋಷಾಕು. ಅವನದೇ ಬಣ್ಣ. ಅವನದೇ ನಿಲುವು – ಎಲ್ಲವೂ ಮಾಡಿಕೊಂಡು ನಿಂತರೆ ಹೊಸ ನಾಟಕ ಶುರುವಾಗುತ್ತದೆ.

(ಕತ್ತಲೆ)

(ಸಖ ನವಾಬನ ವೇಷ ಧರಿಸುತ್ತಾನೆ)

ಸಖ : ಹೇಗಿದೆ ಹೊಸ ಪೋಷಾಕು? ಈಗ ಬೇಗಂ ಕೂಡಾ ಗುರುತಿಸಲಾರಳು. ಇಲ್ಲಿಂದ ಹೊಸ ನಾಟಕ ಪ್ರಾರಂಭವಾಗಲೀ – ರಾತ್ರೋ ರಾತ್ರಿ.

(ಕೈ ಚಪ್ಪಾಳೆ ಹೊಡೆಯುತ್ತಾನೆ. ರಾಜಭಟ್ಟರು ಬರುತ್ತಾರೆ)

(ಸಖ ಕೈಸನ್ನೆಯಲ್ಲಿ ಹಿಂಬಾಲಿಸಿ ಎಂದು ಸೂಚಿಸುತ್ತಾನೆ. ಒಳಗೆ ಹೋಗಿ ಹೊರಬರುತ್ತಾರೆ)

ಸಖ : (ಗುಟ್ಟಾಗಿ) ಮಾತಿಗೆ ಅವಕಾಶವಿಲ್ಲ. ಹೋಗಿ ಈಶ್ವರ ಲಿಂಗವನ್ನು ಒಡೆದು ಅದರ ಕೆಳಗಿರುವ ಚಿನ್ನಾಭರಣವನ್ನು ದೋಚಿಕೊಂಡು ಬನ್ನಿ.

(ಭಟ್ಟರು ಮುಖ ಮುಖ ನೋಡಿ – ಅದರಂತೆ ಮಾಡುತ್ತಾರೆ)

(ಸಖ ಪುನಃ ಸನ್ನೆಯಿಂದ ಬನ್ನಿ ಎನ್ನುತ್ತಾನೆ. ಉಳಿದವರು ತೆರಳುತ್ತಾರೆ)

ಸಖ : ಬೆಂಕಿ ಉರಿಯಲು ಅಷ್ಟು ಸಾಕು.



# ದೃಶ್ಯ 11

(ದಲಿತರ ಕೇರಿ. ದಲಿತರೆಲ್ಲರು ಗುಡಿಸಲಲ್ಲಿ ಎದುರು ಕುಳಿತುಕೊಂಡು ಕಡಲೆಕಾಯಿ ತಿನ್ನುತ್ತಿರುತ್ತಾರೆ)

ಮುದುಕಿ : ಇಂಥಾ ದೊರೆಯಿರೋ ಕಾಲಕ್ಕೆ ನಮ್ಮ ಹೊಟ್ಟೆ ಬೆಂಕಿ ತಣ್ಣಗಾಯ್ತು.

ಕರಿಯಜ್ಜ : ಭೂಮಿ, ಆಕಾಸ ಮುನ್ನು ಕೂತ್ರುನೂವೆ ದೇವ್ರಂಥ ದೊರೆ ಸಿಕ್ದ ನಮ್ಗೆ.

ಯುವಕ : ಕಾಳು ಸಿಕ್ತೊ ಸದ್ದೆ ಬದ್ಕುದೊ.

ಹೆಂಗಸು : ಹೆಂಗಾರೂ ದೊರೆ ಋಣ ತೀರಿಸ್ಕೋಬೇಕು ಅಷ್ಟೇಯಾ.

ಮುದುಕಿ : ದೊಥೆನಾ ಪೂಜೆ ಮಾಡ್ಬೇಕು.

ಯುವಕ : (ಕಡ್ಲಿಕಾಯಿಯನ್ನು ಬಾಯಿಗೆ ಹಾಕಿಕೊಳ್ಳುತ್ತಾ) ಇಂಥೋರೋ ಆಗೋದು ದೊಡ್ಡ ಪುಣ್ಯಾನೆ.

ಕರಿಯಜ್ಜ : ಪುಣ್ಯವೇ.

ಹೆಂಗಸು : ರಿಣ ತೀರಿಸೋಕೆ ಏನ್ ಮಾಡ್ಬಹುದು ಅದ್ನ ಯೋಚ್ನೆ ಮಾಡಿ ಅಷ್ಟೆಯಾ.

ಮುದುಕಿ : ಸಾಬರಲ್ಲಿ ಇಂಥ ದೊರೆಯನ್ನು ನಾನು ಕಂಡೇಯಿಲ್ಲ.

ಯುವಕ : ಸಾಬ-ಗೀಬರು ಎಲ್ಲಾ....

ಹೆಂಗಸು : ನಮ್ಮೊತಾವ ಅಲ್ಲ.

ಕರಿಯಜ್ಜ : ಹಂಗಲ್ಲ ಮಗಾ.

ಯುವಕ : ಮತ್ತೆ?

ಮುದುಕಿ : ನಮ್ಮೂನೂವೆ ನಮ್ದೆ ದೇವ್ರು ದಿಂಡ್ರು ಐತಲ್ಲಾ.

ಹೆಂಗಸು : ದೇವ್ರು ಬತ್ತಾನಾ – ಹಸಿವಿನ ಹೊಟ್ಟೆ.

ಯುವಕ : ಬಾಯಿ ತುಂಬಾ ರೊಟ್ಟಿ ಕೊಡೋಕೆ.

ಕರಿಜಯ್ಯ : ನಂ ಹಣೇಬರ.

ಯುವಕ : ಹಾಂಗೇ ಹೇಳಿಯೋ....

ಹೆಂಗಸು : ನಾವು ಹಾಳಾಗಿರೋದು....

ಮುದುಕಿ : ಹೋಗ್ಲಿ ಅತ್ಲಾಗೆ.

ಯುವಕ : ದೇವ್ರು-ದಿಂಡ್ರು ಅಂದ್ರೆ... ಯಾಕೋ...

ಹೆಂಗಸು : ಯಾಕೋ.... (ಗಕ್ಕನೆ ಮಾತು ನಿಲ್ಲಿಸಿ ದೂರ ನೋಡಿ) ಯಾರೋ ಈ ಕಡೆ ಬತ್ತಾವ್ರೆ.

ಯುವಕ : (ದಿಟ್ಟಿಸಿ ನೋಡಿ) ಈ ರಾತ್ರಿ ಹೊತ್ನಾಗೆ ದೀಪ ಹಿಡ್ಕೊಂಡು ನಿಂತೇರಿಲಿ ಏನ್ ಕೆಲಸ?

ಕರಿಯಜ್ಜ : (ಹೆದರಿಕೊಂಡು) ಕೇಡುಗಾಲ

ಮುದುಕ : (ಕೋಲೂರಿಕೊಂಡು) ಹಗಲು ಹೊತ್ತಾನಾಗೆ ನಮ್ ನೆರಳ್ ಬಿದ್ರೆ ಆಗಾಕಿಲ್ಲಾ ಅನ್ನೋರು – ದೆವ್ವಗಳಂಗೆ ಸೂಡಿ ಹಿಡ್ಕೊಂಡು ಬರೋದ್ ನೋಡಿದ್ರೆ....

ಯುವಕ : ಸುಮ್ನಿರವ್ವ.

(ಕೈಯಲ್ಲಿ ಸೂಡಿ ಬೆಳಕಲ್ಲಿ ಮುಸುಕು ಹಾಕಿದ ವ್ಯಕ್ತಿಯೊಬ್ಬನ ಪ್ರವೇಶ) ದಲಿತರು ಹಿಂದೊಂದೆಡೆಗೆ ಸೇರುವರು – ವ್ಯಕ್ತಿ ಮತ್ತೊಂದೆಡೆ ನಿಲ್ಲುವನು)

ದಲಿತರು ಒಕ್ಕರಲಿನಿಂದ : ಯಾರು?

ವ್ಯಕ್ತಿ : (ಮುಸುಕು ತೆಗೆಯದೆ) ಮೆತ್ತಗೆ-ಮೆತ್ತಗೆ ಜೋರಾಗಿ ಮಾತಾಡಬೇಡಿ ಗದ್ದಲ ಮಾಡಬೇಡಿ.

ಯುವಕ : (ಸ್ವಲ್ಪ ಮುಂದೆ ಬಂದು) ಯಾರು? ಯಾರು ನೀವು?

ವ್ಯಕ್ತಿ : ಹೇಳುತ್ತೇನೆ, ಹೇಳುತ್ತೇನೆ. ಅವಸರ ಬೇಡ.

ಯುವಕ : (ಮತ್ತೊಂದು ಹೆಜ್ಜೆ ಮುಂದಿಟ್ಟು) ಹೇಳ್ಲಿಂದ್ರಾ.... (ಮುದುಕಿಯು ವಾಲಿಕೊಂಡಿದ್ದ ಕೋಲನ್ನ ಎತ್ತಿಕೊಳ್ಳಲು ಹೋಗುವನು)

ವ್ಯಕ್ತಿ : (ಎರಡು ಹೆಜ್ಜೆ ಹಿಂದೆ ಹೋಗಿ ಕೈಯಲ್ಲಿದ್ದ ಬೆಳಕನ್ನು ಮುಖದ ಹತ್ತಿರ ತಂದು ಮತ್ತೊಂದು ಕೈಯಿಂದ ಮರೆ ಮಾಡಿದ್ದ ಶಾಲನ್ನು ತೆರೆಯುವನು) ಪರಿಚಯ ಸಿಗ್ತಾ? ನಾನು ನವಾಬರ ಸಖ. ಕಾಶೀಪಂಡಿತ ಇನ್ನೂ ಪರಿಚಯ ಬೇಕಾ?

ವಿಶ್ವಾಮಿತ್ರಾ ಗೋತ್ರೋತ್ಪನ್ನ ಶಂಭು ಶರ್ಮನ ಏಕೈಕ ಸುಪುತ್ರ. (ವ್ಯಂಗ್ಯದಿಂದ) ಅರ್ಥವಾಗುತ್ತಾ? ಅರ್ಥವಾಗುವುದಿದ್ದರೆ ನೀವು ಯಾಕೆ ಹೀಗಿರುತ್ತಿದ್ದಿರಿ? ನಾನು ಯಾಕೆ ಹಿಂಗಿರುತ್ತಿದ್ದೆ?

ಯುವಕ : (ನಡುಬಗ್ಗಿಸಿ) ತೆಪ್ಪಾಯ್ತು.

ಎಲ್ಲರೂ : ತೆಪ್ಪಾಯ್ತು.

ಸಖ : ಹ್ಹೂ. ತಪ್ಪಾಯ್ತು.
ಗೊತ್ತಾ?
"ಜಾತಿಯೆಂಬುದು ಕೇಳು
ಪಾಪದ ನೆಲಗಟ್ಟು"

ಯುವಕ : (ಪಟ್ಟು ಪಟ್ಟಾಗಿ) ಸರಿ ಧಣಿ.

ಸಖ : ನವಾಬರು ಹೇಳಿದ ಮುಖ್ಯ ಕೆಲಸಕ್ಕಾಗಿ ಬಂದಿದ್ದೇನೆ.

ಯುವಕ : ಹೇಳಿ.

ಸಖ : ನಾಳೆಯಿಂದ ದೇವಸ್ಥಾನ-ಮಸೀದಿ ಅಂತ ಬೇರೆಯಿರಬಾರದು. ಎಲ್ಲರಿಗೂ ಒಂದೇ. ಅದಕ್ಕೆ-

ಯುವಕ : ಅದಕ್ಕೆ

ಸಖ : ಮುಂದೆ ಬಾ

ಸಖ : ನೀವೆಲ್ಲಾ ಹೋಗಿ. ರಹಸ್ಯ ವಿಷಯ. ನವಾಬರು ತಿಳಿಸಿದ್ದಾರೆ. ಎಲ್ಲಿಯಾದರೂ ನಾನು ಬಂದ ವಿಷಯ ಹೊರಗೆ ತಿಳಿಯಿತೋ ನಿಮ್ಮ ತಲೆ ಬೇರೆ-ಕಾಲು ಬೇರೆ.

(ಉಳಿದವರು ತೆರಳುವರು ಯುವಕನ ಹತ್ತಿರ)

ಈ ರಾತ್ರೆಯೇ ಎಲ್ಲಾ ದೇವಸ್ಥಾನದ ಮೇಲೆ ಹಸಿರು ಬಟ್ಟೆ ನೇತು ಹಾಕು. ನಾನು ಹೇಳಿದಂತೆ ಮಾಡು ಅದಕ್ಕೆ ಬೇಕಾದಷ್ಟು ಕೂಲಿ ನಾನು ಕೊಡುತ್ತೇನೆ. ಬಾ. ಹೋಗಿ ಬೆಳಕು ಹಿಡಿದುಕೊಂಡು ಬಾ. ಮುಸುಕು ಹಾಕಿಕೋ.

(ಇಬ್ಬರೂ ನೋಡಿ ಬೆಳಕಲ್ಲಿ ತೆರಳುವರು)

ಯುವಕ : ಅರಿವೇ ಆಗೋಯ್ತು.

ಸಖ : ಸರಿ–ತಪ್ಪುಗಳನ್ನು ತಿದ್ದಿಕೊಳ್ಳುವುದು. ನನ್ನಂಥವನ ಹೊಣೆಗಾರಿಕೆ.

ಯುವಕ : ಸರಿ ಧಣಿ.

ಸಖ : ಹತ್ತಿರ ಬಾ.

ಯುವಕ : ನೀವು ದೊಡ್ಡೋರು. ಮೇಲ್ಜಾತಿಯೋರು.

ಸಖ : (ಮುಂದಕ್ಕೆ ಸರಿದು ಹೆಂಗಸಿನ ಹತ್ತಿರ ಸರಿದು ಅವರ ಗುಂಪಿನ ಮಧ್ಯ ನಿಂತು) ಬಿಟ್ಹಾಕ್ ಬಿಟ್ಹಾಕ್ ಆ ಪ್ರಶ್ನೆ. ಅದನ್ನು ನಾನ್ ಕೇಳಿದ್ದಾ?

ಕರಿಜಯ್ಯ : (ದೂರ ಸರಿದು) ನೀವು ನಮ್ನ ಮುಟ್ಟಿದ್ರೆ ದೇವ್ರು ಮುನ್ದು ಶಾಪ ಕೊಟ್ಟಾನು.

ಮುದುಕಿ : ಬೆಳೆ ನಾಶಾ ಅದೀತು.

ಸಖ : (ನಗುತ್ತಾ) ಅದು ನಿಮ್ಮನ್ನು ಹೆದ್ರಿಸೋದಿಕ್ಕೆ ಮೇಲ್ಜಾತಿಯೋರ್ ಕಟ್ಟಿದ ಕತೆ ಅಷ್ಟೆ.

ಕರಿಯಜ್ಜ : ಹಿಂದಿನಿಂದಲೂ....

ಸಖ : ಗೊತ್ತು ಗೊತ್ತು. ಆದ್ರೆ ನಾನು ಜಾತ್ಯಾತೀತ (ಹೆಂಗಸಿನ ಹೆಗಲಿಗೆ ಕೈ ಹಾಕಿ) ನಾನು ಉಳಿದವರ ಹಾಗಲ್ಲ. ಎಲ್ಲಕ್ಕೂ ತಿಲಾಂಜಲಿ ಕೊಟ್ಟಿದ್ದೇನೆ. ಎಲ್ಲವನ್ನೂ ಬಿಟ್ಟಿದ್ದೇನೆ. ಜಾತಿ–ಧರ್ಮ–ಎಲ್ಲವೂ. ಎಲ್ಲಾ ಮನುಷ್ಯರು ಒಂದೇ ಅಂತ ನಂಬಿದ್ದೇನೆ. ಅದಕ್ಕೇ ನವಾಬರೊಂದಿಗಿದ್ದೇನೆ.



# ದೃಶ್ಯ 12

(ಬರಿಯ ದೃಶ್ಯ ಮಾತ್ರ)

ಗಲಭೆ, ಯಾರು-ಯಾರನ್ನು ಕೊಲ್ಲುತ್ತಿದ್ದಾರೆ ಎನ್ನುವುದು ಅಸ್ಪಷ್ಟ. ದಲಿತ ಕೇರಿಗೆ ಬೆಂಕಿ ಬೀಳುತ್ತದೆ.

ಒಬ್ಬಳು ಗರ್ಭಿಣಿ-ಅವಳು ಹಿಂದು/ಮುಸ್ಲಿಂ ಎರಡನ್ನೂ ಸಂಕೇತಿಸುವಂತೆ ರಣ ನೃತ್ಯ-ಅಯ್ಯೋ ಧ್ವನಿ, ಚೀರಾಟ. ಇಷ್ಟು ಮಾತ್ರ)

ಇದು ಮುಗಿಯುತ್ತಿರುವಂತೆಯೇ ಬೇಗಂ ಮತ್ತು ಸಖಿ ಕೈ ಕೈ ಹಿಡಿದು ಸುತ್ತುವರಿದು ರಂಗದಿಂದ ಸರಿಯುವರು. ಮಧ್ಯ ನಗೆ.

ಅವರ ಹಿಂದೆ-ಪುರೋಹಿತ-ಅವರ ಬೆನ್ನ ಹಿಂದೆ ಹಿಡಿದು ಋಗ್ವೇದಿ, ಜೋಯಿಸ, ಶ್ರೋತ್ರಿ ಬಂದು ಹೋಗುವರು. ಹಿಂದಿನಿಂದ ಮಂತ್ರ "ಓಂ ನಮಃ ಶಿವಾಯ"

ಅವರ ನಂತರ ಸಂತ-ಸುಮ್ಮನೆ ಬಂದು ಎಲ್ಲವನ್ನು ನೋಡುತ್ತಾ ತೆರಳುವನು.

ಮಂತ್ರಿ ಮತ್ತು ಸೇನಾಧಿಪತಿ ಬಂದು ತಲೆಗೆ ಕೈ ಹೊತ್ತು ನಡೆಯುವವರು. ತಕ್ಷಣ-ಒಂದು ಸಣ್ಣ ಮೌನ.

ಒಬ್ಬ : ಹಿಂದು

ಮತ್ತೊಬ್ಬ : ಮುಸ್ಲಿಂ

ಒಬ್ಬ : ಖಡ್ಗ

ಮತ್ತೊಬ್ಬ : ಬಂದೂಕು

ಒಬ್ಬ : ನಾವು

ಮತ್ತೊಬ್ಬ : ನೀವು

ಒಬ್ಬ : ಬೇರೆ

ಮತ್ತೊಬ್ಬ : ಬೇರೆ. ಬೇರೆ.

ಒಬ್ಬ : ನಮ್ಮ ಮಧ್ಯ

ಮತ್ತೊಬ್ಬ : ದ್ವೇಷವಿದೆ

ಒಬ್ಬ : ಆಗ ನಾವು

ಮತ್ತೊಬ್ಬ : ಒಂದೇ ತಟ್ಟೆಯಲ್ಲಿ ಉಂಡೆವು.

ಒಬ್ಬ : ಈಗ ನಾವು

ಮತ್ತೊಬ್ಬ : ಛಿದ್ರಗೊಂಡಿದ್ದೇವೆ. ಬಿಳಿ-ಕಪ್ಪು, ಗಂಡು-ಹೆಣ್ಣು.

(ಇಬ್ಬರೂ ಪರಸ್ಪರ ಬೆನ್ನು ಹಾಕಿ ದೂರ ದೂರ ನಿಂತುಕೊಳ್ಳುತ್ತಾರೆ. ಮಧ್ಯ ಬೆಂಕಿ ಉರಿಯುತ್ತದೆ)

(ಹೀಗೂ ಮಾಡಬಹುದು:

ಬಿಳಿಯವರು ಕಪ್ಪಿನವರು

ಗಂಡು ಹೆಣ್ಣು

ಹಿಂದು ಮುಸ್ಲಿಂ

(ಎಲ್ಲರೂ ಒಂದೇ ಬಾರಿಗೆ) ನಾವು ಬೇರೆ.

ಎನ್ನುವುದು.

ಮಧ್ಯ ಬೆಂಕಿ.

ಮಧ್ಯ ಸೇನಾಧಿಪತಿ ಮತ್ತು ಮಂತ್ರಿ ಒಟ್ಟಿಗೆ ನಡುರಂಗಕ್ಕೆ ಬಂದು 'ಹೊತ್ತಿ ಉರಿಯುವ ಈ ದೇಶವನ್ನು ಕಾಪಾಡುವ ಶಕ್ತಿ ನಮಗಿಲ್ಲ. ಅಲ್ಲಾಹು ಕಾಪಾಡಲಿ'



# ದೃಶ್ಯ 13

(ನವಾಬ ಮತ್ತು ಗೌರಿ ಅಂತಃಪುರದ ಕೋಣೆಯಲ್ಲಿದ್ದಾರೆ. ಹೊರಗಡೆಯಲ್ಲಿ ಗಲಾಟೆ ನಡೆಯುತ್ತಿರುವ ಅರಿವು ಅವರಿಗಿಲ್ಲ. ಅವರದೇ ಲೋಕದಲ್ಲಿದ್ದಾರೆ.)

ನವಾಬ : ಗೌರಿ, ನಾನಿವತ್ತು ನಿನಗೆ ನಮ್ಮ ಉದ್ಯಾನದಿಂದ ಬರುವಾಗ ಮಲ್ಲಿಗೆಯನ್ನು ತಂದೆ. ನಾನೇ ನಿನ್ನ ತಲೆಗೆ ಎಣ್ಣೆಯನ್ನು ಹಚ್ಚಿ, ತಲೆ ಬಾಚಿ ಹೆಣೆದು ಮಲ್ಲಿಗೆ ಮುಡಿಸುತ್ತೇನೆ.

ಗೌರಿ : ನಿಮಗೆ ತಲೆ ಬಾಚೋಕೆ ಬರುತ್ತಾ?

ನವಾಬ : ಪ್ರಯತ್ನ ಮಾಡ್ತೀನಿ.

ಗೌರಿ : ಆದ್ರೂ ತಲೆಗೆ ಎಣ್ಣೆ ಹಾಕೋದು ಅಂದ್ರೆ...

ನವಾಬ : ಇಲ್ಲ ಗೌರಿ. ತಲೆಗೆ ಎಣ್ಣೆ ಹಾಕ್ಕೋಬೇಕು. ಈ ವಯಸ್ಸಿನಲ್ಲಿ ಹಟ ಮಾಡಬಾರದು. ಮುಂದೆ ಕಷ್ಟ

ಗೌರಿ : ಮುಂದೆ ಏನಾಗುತ್ತೆ?

ನವಾಬ : ನೆತ್ತಿ ತಂಪಾಗಿದ್ದರೆ ಕಣ್ಣು ತಂಪಾಗಿರುತ್ತದೆ. ಕಣ್ಣು ಉರಿ ಬರೋಲ್ಲ. ನಿನಗೆ ಕಣ್ಣು ಉರಿ ಬರಬಾರದು. ಯಾರನ್ನು ಕಂಡರೂ.

ಗೌರಿ : (ನಗುತ್ತಾ) ಉರಿ ಬರುತ್ತೆ, ನೀವು ಸರಿಯಾಗಿ ಊಟ ಮಾಡದೆ ಇದ್ದರೆ. ನೀವು ಬೇಜಾರಾಗಿದ್ದರೆ. ನನ್ನ ನವಾಬರಿಗೆ ಏನೂ ಆಗಬಾರದು ಅಂತ ದಿನಾ ಬೆಳಗ್ಗೆ ಎದ್ದು ಭೂಮಿಗೆ ಕಾಲಿಡುವ ಮುನ್ನ ಪ್ರಾರ್ಥನೆ ಮಾಡುತ್ತೇನೆ. ಗಣಪತಿಗೆ ಕೇಳಿಕೊಳ್ಳುತ್ತೇನೆ. ದೇವರೆ ನವಾಬರಿಗೆ ಆಯುಸ್ಸು, ಆರೋಗ್ಯ ಕೊಡು ಅಂತ. ಅನಂತರವೇ ಕಣ್ಣು ತೆರೀತಿನಿ.

ನವಾಬ : ಎಷ್ಟೊಂದು ಒಳ್ಳೆಯ ಮನಸ್ಸು ನಿನಗೆ? ಹೌದು ನನ್ನ ಆಯಸ್ಸು ಆರೋಗ್ಯ ಕಟ್ಕೊಂಡು ನೀನು ಏನು ಮಾಡ್ಬೇಕು ಅಂತ ಇದ್ದಿಯಾ?

ಗೌರಿ : ನೀವು ನವಾಬರು, ಸಾಬರು ಅಂತ ನನಗನ್ನಿಸೊಲ್ಲ ನಿಮ್ಮನ್ನ ನೋಡಿದರೆ. ಮಗುವಿನ ಹಾಗೆ ಇದ್ದೀರಿ. ನಿಮ್ಮನ್ನ ಕಾಲಲ್ಲಿ ತಟ್ಟಿ ಮಲಗಿಸಿಕೋಬೇಕು ಅನಿಸುತ್ತೆ. ಒಮ್ಮೊಮ್ಮೆ ನೀವು ಮಾತಾಡುವುದು ಕೇಳಿದರೆ ತುಂಬಾ ದೊಡ್ಡ ಋಷಿಗಳ ಹಾಗೆ ಕಾಣಿಸ್ತೀರಿ. ನಿಜ ಹೇಳಲಾ? ನೀವು ಬೇಜಾರಾಗಿ ನಾನು ಸಾಯುವ ದಿನ ಹತ್ತಿರ ಬಂತು, ಕಣ್ಣು ಮಂಜಾಗಿದೆ ಅಂದಾಗ ನನಗೆ ಅಳು ಬರುವ ಹಾಗೆ ಅನಿಸುತ್ತೆ. ನಂಗೆ ಸಹಿಸೋಕೆ ಆಗೋಲ್ಲ.

ನವಾಬ : ಗೌರಿ, ನೀನು ಹಾಗೆ ಹಟ ಹೊಂದಬಾರದು. ಮನೆ ಬಿಟ್ಟು ಓಡಿ ಬರುವಾಗ ನಿಂಗೆ ಎಷ್ಟೊಂದು ಧೈರ್ಯ ಇತ್ತು ಅಲ್ವಾ? ನನ್ನ ಅವಲಂಬನೆಯಿಲ್ಲದೆಯೂ ನೀನು ಬೆಳೆಯಬೇಕು. ಅದು ನಿನ್ನ ಶಕ್ತಿಯಾಗಬೇಕು. ಇಲ್ಲದಿದ್ದರೆ ನೀನೆಂಥ ಗೌರಿ?

ಗೌರಿ : ನಿಮ್ಮೊಂದಿಗೆ ಇರುವಾಗ ಧೈರ್ಯ ಇರುತ್ತೆ. ರಾತ್ರಿ ಹೊದ್ದುಕೊಂಡು ಮಲಗುವಾಗಲೂ ಕಾಡಿನಲ್ಲಿ ನೀವು ನನ್ನನ್ನು ಮಲಗಿಸಿದ್ದನ್ನು ನೆನಪಿಸಿಕೊಂಡು ಮಲಗುತ್ತೇನೆ. ಆಗ ಅಪ್ಪ -ಅಮ್ಮ ನೆನಪಿಗೆ ಬರೋಲ್ಲ. ನೀವು ಮಾತ್ರ ನೆನಪಿಗೆ ಬರುತ್ತೀರಿ. ನಿಮ್ಮ ಆವತ್ತಿನ ಪರಿಮಳ ಮೈಯಿಡೀ ತುಂಬಿಕೊಂಡಂತೆ ಇರುತ್ತೆ.

ನವಾಬ : ಗೌರಿ ಅತಿ ಭಾವುಕತೆ ಒಳ್ಳೆಯದಲ್ಲ. ನನಗೀಗ ನೀನು ಹಿಂಗೆ ಹೇಳಿದ್ದನ್ನು ಕೇಳಿದರೆ ಒಪ್ಪಿಕೊಳ್ಳಲು ಆಗುತ್ತಿಲ್ಲ. ನನಗೆ ರೂಢಿಯಾಗಿದೆ. ಜನರು, ಅಂತಃಪುರದವರು, ಬೇಗಂ, ಎಲ್ಲರೂ ನನ್ನನ್ನು ಹುಚ್ಚ; ವಿಕ್ಷಿಪ್ತ ಎಂದು ಕರೆದು ಹೀಯಾಳಿಸಿದರು. ನಾನೂ ಅದೇ ಸರಿಯೆಂದು ಒಪ್ಪಿಕೊಂಡಿದ್ದೇನೆ. ನಾನು ಹುಚ್ಚ ಎಂಬುದನ್ನು ಒಪ್ಪಿಕೊಳ್ಳುವುದು ಒಪ್ಪಿಕೊಳ್ಳದಿರುವುದಕ್ಕಿಂತ ಹೆಚ್ಚು ಲೇಸು. ಯಾವುದನ್ನು ಜನರು ಕಷ್ಟಪಟ್ಟು ನನ್ನನ್ನು ಮನುಷ್ಯನೇ ಅಲ್ಲವೆಂದು ಹೇಳಲು ಆಧಾರ ಹುಡುಕುತ್ತಿದ್ದಾರೋ-ಅದಕ್ಕಿಂತ ಅತ್ಯಂತ ಸುಲಭವಾಗಿ ನಾನೇ ಒಪ್ಪಿಕೊಳ್ಳುತ್ತೇನೆ-ಈ ಜಗತ್ತಿನಲ್ಲಿ ನಾನು ಸಾಯುವಾಗ ಯಾರೂ ನನ್ನನ್ನು ಒಳ್ಳೆಯವನೆಂದು ಹೇಳಬಾರದು. ನೀನೂ ಸಹಿತ. ನನಗದು ಬೇಡ.

ಗೌರಿ : ಇಲ್ಲ. ನೀವು ಒಳ್ಳೇಯವರು. ಯಾರೋ ಹಾಗಂದ ಮಾತ್ರಕ್ಕೆ ನೀವು ಹಾಗಾಗುವುದಿಲ್ಲ.

ನವಾಬ : ನನ್ನ ಮಾತಿನ ತಿರುಗು ಬಾಣ. ಅದು ನಡೆಯದು ಮರಿ ನನ್ನಲ್ಲಿ. ನಾನು ಚುಚ್ಚಿಸಿಕೊಂಡ ಪ್ರತಿಯೊಂದು ಮುಳ್ಳಿನ ನೆನಪೂ ನನಗಿದೆ. ಮುಳ್ಳನ್ನು ಕಿತ್ತು ಬಿಸಾಕಿ-ನೋವು ಮಾಯವಾಗಿದೆ ಎನ್ನುವ ಪೈಕಿ ನಾನಲ್ಲ. ನನ್ನ ಪಾದದ ತುಂಬಾ ಮುಳ್ಳು ಚುಚ್ಚಿದ ಪ್ರತಿಯೊಂದು ಗುರುತುಗಳಿಗೂ ಚರಿತ್ರೆಯಿದೆ ಎಂಬುದು ಗೊತ್ತು. ಅದನ್ನು ಮರೆತು ಬಿಡಿ ಎಂದು ಹೇಳುವುದು ನಿನಗಲ್ಲ-ಪ್ರತಿಯೊಬ್ಬರಿಗೂ ಸುಲಭ. ಯಾಕೆಂದರೆ ಎಲ್ಲರೂ ಅಷ್ಟೆ. ಪ್ರತಿಯೊಬ್ಬರಿಗೂ ಹೇಳುವ ಒಂದೇ ಒಂದು ವಾಕ್ಯವೆಂದರೆ ಇದು ಮರೆತುಬಿಡಿ. ಮರೆವು ಎನ್ನುವುದು ಅಷ್ಟು ಸುಲಭವೆ?

ಗೌರಿ : ನಿಮಗೆ ಹೇಳುವಷ್ಟು ಬುದ್ಧಿವಂತಳಲ್ಲ. ಆದರೂ....

ನವಾಬ : (ದಡಕ್ಕನೆ ಎದ್ದು ನಿಂತು)ಬೇಡ. ನನ್ನನ್ನು ಯಾರಾದರೂ ನಂಬಿದರೆ ಅನುಮಾನ ಬರುತ್ತೆ. ತುಂಬಾ ಪ್ರೀತಿಸಿದರೂ. ನಿನಗೆ ಕೈ ಮುಗಿತೀನಿ. ನನ್ನ ಶವವನ್ನು ನರಿ-ನಾಯಿ ತಿಂದರೂ ಅಡ್ಡಿಯಿಲ್ಲ. ನಾನದಕ್ಕೆ ಬೇಸರ ಪಡುವುದಿಲ್ಲ. ಸದಾನಿಂದನೆಯ ಮಾತುಗಳು. ಅರಮನೆಯ ಸಿಂಹಾಸನದಲ್ಲಿ ಕುಳಿತ ವೇಳೆ ಸಾವಿರಾರು ಜನರ ಅನುಮಾನಗಳು. ಅರಮನೆಯ ಸಿಂಹಾಸನದಲ್ಲಿ ಕುಳಿತ ವೇಳೆ ಸಾವಿರಾರು ಜನರ ಅಮಾನತುಗಳು. ನಾನು ಯಾವುದಾಗಿರಲಿಲ್ಲವೋ ಅದನ್ನೇ ಸದಾ ನನ್ನ ಮನಸ್ಸಿನ ಮೇಲೆ ಹೇರಿ ನನ್ನ ಮನಸ್ಸು ಈಗ ಯಾವುದಕ್ಕೂ ಒಗ್ಗುತ್ತಿಲ್ಲ.

(ಅಲ್ಲಿಯೇ ಕುಸಿದು ಕುಳಿತು)

ಗೌರಿ ಬದುಕಲೇಬೇಕೆಂಬ ಹಟ ಬಿಟ್ಟಿದ್ದೇನೆ. ಬದುಕಬೇಕಲ್ಲ ಎಂದು ಎಷ್ಟು ಬೇಕೋ ಅಷ್ಟು ತಿನ್ನುತ್ತೇನೆ. ನೀರು ಕುಡಿಯುತ್ತೇನೆ. ಅಂಗುಲಂಗುಲ ಸಾಯುತ್ತೇನೆ. ಸೂರ್ಯ ಮುಳುಗಿದ್ದಾನೆ.
ಇದೋ ನೋಡು-ಮತ್ತೆ ನನ್ನ ಕೈಗಳು ನಡುಗುತ್ತಿವೆ.
ನನ್ನ ಕಣ್ಣು ಸರಿಯಾಗಿ ಕಾಣಿಸುತ್ತಿಲ್ಲ.
ಬುದ್ಧಿ ಬಿಡುತ್ತಿಲ್ಲ.
ಇಡಿಯ ನನ್ನ ದೇಹ ನಾನು ಹೇಳಿದ ಹಾಗೆ ಕೇಳುತ್ತಿಲ್ಲ.

ಅಗ್ರಹಾರದ ಹುಡುಗಿ ನೀನು. ನಿನ್ನನ್ನು ಒಳ್ಳೆಯ ಬ್ರಾಹ್ಮಣ ಹುಡುಗನೊಬ್ಬನಿಗೆ ಮದುವೆ ಮಾಡಿಸುತ್ತೇನೆ.

(ಜೋರಾಗಿ ಅಳುತ್ತಾನೆ)

ಇನ್ನು ಕೈಯಲ್ಲಿ ಆಗುತ್ತಿಲ್ಲ; ಎಷ್ಟೂಂತ ನಡೆಯಲಿ?

ಶಕ್ತಿಯೇ ಇಲ್ಲ.

ಗೌರಿ : (ಅವನಹತ್ತಿರ ಬಂದು ನಡುಗುತ್ತಿರುವ ಅವನ ದೇಹವನ್ನು ತಡವಿ) ನೀವು-ನಿಮ್ಮ ಪುಟ್ಟ ಗೌರಿಯ ಮುಖ ನೋಡಿ. ಅಳುವುದನ್ನು ನಿಲ್ಲಿಸಿ.

ಒಂದೇ ಒಂದು ಕ್ಷಣ ದುಃಖದ ಗಳಿಗೆಯನ್ನು ಮರೆತು ಸುಖದ ಗಳಿಗೆಯನ್ನು ಮಾತ್ರ ನೆನಪಿಸಿಕೊಳ್ಳಿ.

ಬನ್ನಿ, ನಿಮ್ಮ ಪುಟ್ಟ ಹುಡುಗಿ ಇಟ್ಟ ತೊಡೆಯ ಮೇಲೆ ಮಲಗಿ ವಿಶ್ರಾಂತಿ ತೆಗೆದುಕೊಳ್ಳಿ. ಈಗ ನಿಮಗದು ಅಗತ್ಯವಿದೆ.

(ಪುಟ್ಟ ಮಗುವನ್ನು ಮಲಗಿಸುವಂತೆ ನವಾಬನನ್ನು ತನ್ನ ತೊಡೆಯಲ್ಲಿ ಮಲಗಿಸುವಳು. ನವಾಬ ಪುಟ್ಟ ಮಗುವಿನಂತೆ ಮುದುಡಿ ಮಲಗುವನು)

(ಸಖ ರಾಜನ ಪೋಷಾಕಿನಲ್ಲಿ ಮತ್ತು ಬೇಗಂ, ಹಿಂದೆ ಸೈನಿಕರು)

ಸಖ : ನವಾಬ ಮತ್ತು ಗೌರಿ ನಿವೀಗ ಗೃಹ ಬಂಧನಕ್ಕೆ ಒಳಗಾಗಿದ್ದೀರಿ.

(ನವಾಬ ತಟ್ಟನೆ ಕಣ್ಣು ಹೊಸಕುತ್ತಾ ಏಳುವನು. ಗೌರಿ ಗಾಬರಿಯಲ್ಲಿ ಮೂಲೆಯಲ್ಲಿ ಕೂರುವಳು)

ಬೇಗಂ : ಏಯ್, ನವಾಬ. ಈಗ ಅನುಭವಿಸು. ಎಳಸು ಹೆಣ್ಣನ್ನು ಅನುಭವಿಸಿದಂತಲ್ಲ ಕಾರಾಗೃಹದ ವಾಸ. ಕತ್ತಲೆಯ ಕೋಣೆಯ ಗಬ್ಬು ವಾಸನೆಯಲ್ಲಿ ನಿಮ್ಮಿಬ್ಬರ ಪಾಪ ತೊಳೆದುಕೊಳ್ಳಿ.

ಸಖ : ನಾಳೆ, ಆಸ್ಥಾನದಲ್ಲಿ ಎಲ್ಲರೆದುರು ಈ ಹುಚ್ಚು ನವಾಬನ ವಿಚಾರಣೆ! ಹುಚ್ಚುನಾಯಿಗೆ ಸಾರ್ವಜನಿಕ ಸನ್ಮಾನ. ಈಗ ನನ್ನ ಹಿಂದೆ ಬನ್ನಿ.

(ಬೇಗಂ ನಗುವಳು) (ಕತ್ತಲೆ)



## ದೃಶ್ಯ 14

ಸಖಿ : ಈ ವಿಚಾರಣೆಯನ್ನು ನಾನು ಮತ್ತು ಬೇಗಂ ನಡೆಸುತ್ತೇವೆ. ಎಲ್ಲರೂ ಸಹಕರಿಸಬೇಕು. ನಮಸ್ಕಾರ. (ಅತಿ ವಿನಯದಿಂದ) ದಯಮಾಡಿ ಎಲ್ಲರೂ ತಮ್ಮ ತಮ್ಮ ಆಸನದಲ್ಲಿ ಕುಳಿತುಕೊಳ್ಳಿ. ನಾವು ಎಲ್ಲರನ್ನು ಗೌರವಿಸುತ್ತೇವೆ ಎಂಬುದನ್ನು ಮರೆಯಬಾರದು. ನಮಗೆ ಹಿಂಸೆಯಲ್ಲಿ ನಂಬಿಕೆಯಿಲ್ಲ. ಗಲಭೆಯಲ್ಲಿ ನಂಬಿಕೆಯಿಲ್ಲ. ನಾವು ಸತ್ಯ, ಧರ್ಮ, ನ್ಯಾಯವನ್ನು ಎತ್ತಿ ಹಿಡಿಯುವುದಕ್ಕೆ ಬಂದಿದ್ದೇವೆ.

ಬೇಗಂ : ಇವರು ಹೇಳುವುದು ನಿಜ.

(ಪುರೋಹಿತ, ಶ್ರೋತ್ರಿ, ಜೋಯಿಸ, ಮೌಲ್ವಿ, ಕರಿಯಜ್ಜ, ಹೆಂಗಸು, ಸಖಿ ಎಲ್ಲರು ಎದುರು ಬದುರಾಗಿ ಕುಳಿತುಕೊಳ್ಳುತ್ತಾರೆ. ಮಧ್ಯ ವಿಚಾರಣೆಗೆಂದು ಸಖಿ ಕುಳಿತ. ಅವನ ಪಕ್ಕದಲ್ಲಿ ಬೇಗಂ)

ಸಖಿ : ಹೋಗಿ ನವಾಬನನ್ನು ಮರ್ಯಾದೆಯುತವಾಗಿ ಕರೆದು ತನ್ನಿ.

(ಸೈನಿಕರು ಹೋಗುತ್ತಾರೆ ನವಾಬನನ್ನು ಕೈ-ಕೋಳ ತೊಡಿಸಿ ಕರೆದು ತರುತ್ತಾರೆ. ಜೊತೆಗೆ ಗೌರಿಯನ್ನು. ಗೌರಿಯು ಮೈ ತುಂಬಾ ಸೆರಗು ಹೊದ್ದಿರುತ್ತಾಳೆ)

ಸಖಿ : (ಸೈನಿಕರನ್ನು ಉದ್ದೇಶಿಸಿ) !! ನಾಯಿಗಳೇ, ಒಂದು ಕಾಲಕ್ಕೆ ನಿಮಗೆ ಉಪ್ಪು ಕೊಟ್ಟ ಧಣಿಯವರು. ಮರೆಯಬೇಡಿ. ಕೋಳವನ್ನು ಬಿಚ್ಚಿ.

(ಸೈನಿಕರು ಬಿಚ್ಚಲು ಹೋಗುತ್ತಾರೆ)

ಬೇಗಂ : ಕೈದಿಗಳು ಕೈದಿಗಳೇ. ಅರಸನಾರದೇನು, ಮತ್ತೊಬ್ಬನಾದರೇನು?,
ಕೈಗಳಿಗೆ ಕೋಳವಿರಲಿ. ಬಿಚ್ಚಬೇಡಿ.

ಸಖ : ಅವರು ರಾಜ ಕೈದಿ ಬೇಗಂ, ದುಡುಕಬಾರದು.

ಬೇಗಂ : ಇಲ್ಲ. ನನ್ನ ಅಭಿಪ್ರಾಯದಂತೆ ನಡೆಯಬೇಕು. ಅದನ್ನು ಮೀರಕೂಡದು.

ಸಖ : (ಸ್ವಗತ) ಅದೂ ನಡೆಯಲಿ. ಈ ಹೆಂಗಸಿಗೆ ತನ್ನ ಹಡಗು ಮುಳುಗುತ್ತಿರುವುದು ತಿಳಿಯುತ್ತಿಲ್ಲ. ಎಲ್ಲಾ ದೈವೇಚ್ಛೆ! ರತಿಯನ್ನು ರಾಜಕೀಯ ಶಾಸ್ತ್ರವಾಗಿ ಬಳಸಿದ ಪಂಡಿತನಿಗೆ ಈ ಹೆಂಗಸಿನ ಮೈಯಲ್ಲಿ ಎಲ್ಲಿ ಕಪ್ಪು ಮಚ್ಚೆಯಿದೆ. ಎಲ್ಲಿ ಕೆಂಪು ರಕ್ತದ ಕಲೆಯು ಮೂಡಬೇಕು ಎಂಬುದರ ಅರಿವೂ ಇದೆ. ಆಟ ನಡೆಯಲಿ. ಚೆನ್ನೆಮಣೆಯಾಟ ಆಡಿಗೊತ್ತಿರುವ ಹೆಂಗಸಿಗೆ ವಿನಾಕಾರಣ ತನ್ನ ಗಂಡನ ಮೇಲೆ ಇಷ್ಟೊಂದು ಸೇಡಾದರೆ, ಹ್ಞೂಂ, ನನಗೇನು.

ನವಾಬ : (ನಿರಾತಂಕವಾಗಿ) ನನ್ನ ಕೈ ಕೋಳವನ್ನು ಬಿಚ್ಚುವ ಯಾವ ಅವಶ್ಯಕತೆಯೂ ಕಾಣಿಸುವುದಿಲ್ಲ.

ಸಖ : ನವಾಬರು ಗಾಬರಿಯಾದಂತಿದೆ?

ನವಾಬ : ಇಲ್ಲ.

ಬೇಗಂ : ಪುಕ್ಕಲುತನ ನಿಮ್ಮ ಸ್ವಭಾವ. ಅದಕ್ಕೆ ಧೈರ್ಯದ ಲೇಪನ ಯಾಕೆ ಈ ನಾಟಕ.

ನವಾಬ : ನಾಟಕವು ರಂಗದ ಮೇಲೆ. ಇಲ್ಲಿ ಅಲ್ಲವೆಂದು ತಿಳಿದುಕೊಂಡಿದ್ದೇನೆ.

ಬೇಗಂ : ಪ್ರತ್ಯುತ್ತರ ಕೊಡುವ ಅವಕಾಶ ನಿಮಗಿಲ್ಲ.

ನವಾಬ : ನೀವು ಕೇಳಿದ್ದಕ್ಕೆ ಹೇಳಿದೆ.

ಸಖ : ಬಿಡಿ. ಬಿಡಿ. ಆ ವಿಚಾರ. ಅದು ಅನವಶ್ಯಕ.

ಗೌರಿ : ಇಲ್ಲಿ ಅನಗತ್ಯವಾದುದನ್ನು ಕೇಳಿ ಕೆಣಕಬಾರದು.

ನವಾಬ : ಗೌರಿ, ಏನೂ ಮಾತಾಡಬೇಡ. ನಾವು ಮಾತಾಡುವ ಅವಕಾಶ ಮತ್ತು ಹಕ್ಕುಗಳನ್ನು ಕಳೆದುಕೊಂಡಿದ್ದೇವೆ. ನಿನ್ನನ್ನು ಪ್ರಶ್ನಿಸುವವರೆಗೆ ಸುಮ್ಮನಿರು.

(ಜೋಯಿಸಿ ಕುಳಿತಲ್ಲಿಂದ ಎದ್ದು ಹೆಗಲ ಮೇಲಿನ ಶಾಲು ಸರಿಸಿ, ಜನಿವಾರವನ್ನು ಒಮ್ಮೆ ತೋರಿಸಿ, ಕಚ್ಚೆ ಸರಿಪಡಿಸಿಕೊಳ್ಳುತ್ತಾನೆ)

ಜೋಯಿಸ : (ಸಖಿನ ಕಡೆಗೆ ಕೈ ಮುಗಿದು) ಖಾವಂದರು ಕ್ಷಮಿಸಬೇಕು. ಸಭಾ ಮರ್ಯಾದೆಯನ್ನು ಉಲ್ಲಂಘಿಸಿದೆ ಎಂದು ತಪ್ಪು ತಿಳಿಯಬಾರದು. (ಆಕ್ಷೀ) ಈ ಶೀತ ಬೇರೆ ಕೇಡು. ಏನಪ್ಪಾ ಅಂದ್ರೆ ಈ ಸಭೆಯಲ್ಲಿ (ಗೌರಿಯನ್ನು ತೋರಿಸಿ) ಅವಳು ಮಾತಾಡುವಾಗ ಪಾಟೀ ಸವಾಲು ಮಾಡಲು ನನಗೆ ಅವಕಾಶ ಕೊಡಬೇಕು. ಇದು ನನ್ನ ವಿಜ್ಞಾಪನೆ. (ಕಚ್ಚೆ ಸರಿಪಡಿಸಿಕೊಂಡು, ಮೂಗು ತಿಕ್ಕುತ್ತಾ, ಗೌರಿಯನ್ನು ಕೆಕ್ಕರಿಸಿಕೊಂಡು ನೋಡಿ ಕುಳಿತುಕೊಳ್ಳುವನು)

ಸಖಿ : ಸಭಾ ಮರ್ಯಾದೆ ಉಲ್ಲಂಘಿಸಬೇಡಿ. ಶಿಕ್ಷೆಯಾದೀತು. ಎಚ್ಚರ.

(ಎಲ್ಲರೂ ಮೌನ ವಹಿಸುವರು. ಗೌರಿಯ ಕಡೆ ನೋಡಿ) ನೀನೂ ಅಷ್ಟೆ. ಕೇಳಿದ್ದಕ್ಕೆ ಉತ್ತರಿಸಿದರೆ ಸಾಕು. ಹೇಳಿ ನವಾಬರೆ, ಅಧಿಕಾರದಲ್ಲಿ ಇದ್ದವರು ತಾವು ಹೌದಲ್ಲವೆ?

ನವಾಬ : ಹೌದು.

ಸಖಿ : ಅಧಿಕಾರದಲ್ಲಿದ್ದವರು ಹೇಗಿರಬೇಕು?

ನವಾಬ : ಜನತೆಗೆ ಒಳ್ಳೆಯದನ್ನು ಮಾಡಬೇಕು.

ಸಖಿ : ನೀವು ಏನು ಮಾಡಿದಿರಿ?

ನವಾಬ : ಬರಗಾಲದಲ್ಲಿ ಬಡವರಿಗೆ ದವಸ ಧಾನ್ಯ ಹಂಚಿದೆ.

ಸಖಿ : ಕಣ್ಣಾರೆ ಕಂಡಿರಾ?

ನವಾಬ : ಇಲ್ಲ. ಹಾಗೆಂದು ಆಜ್ಞೆ ಮಾಡಿದ್ದೆ.

ಸಖಿ : ಆಜ್ಞೆ ಮಾಡಿದಿರಿ. ರಾಜ್ಯದ ಉಗ್ರಾಣ ಖಾಲಿಯಾಯಿತು ಅಷ್ಟೆ. ಅಲ್ಲಿಗೆ ಬಡವರ ಹಸಿವು ತಣಿಯಲಿಲ್ಲ. ಯಾವಾಗ ರಾಜನಾದವನು ಇದನ್ನು ನೋಡಿಕೊಳ್ಳುವುದಿಲ್ಲವೋ ಅಲ್ಲಿಗೆ ಪ್ರಜೆಗಳ ದೃಷ್ಟಿಯಲ್ಲಿ ಅವನು ಅಪರಾಧಿ.

(ನವಾಬ ಮೌನ)

ಸಖ : ನಿಮ್ಮ ಎರಡನೆಯ ಅಪರಾಧ. ದಂಗೆಯಾಯಿತು. ಸಾವಿರಾರು ಜನ ನಿರಪರಾಧಿಗಳು ಸತ್ತರು. ನೀವು ಈ ಗೌರಿಯೊಂದಿಗೆ ಚಕ್ಕಂದದಲ್ಲಿದ್ದಿರಿ.

ನವಾಬ : ತಪ್ಪು.

ಸಖ : ತಪ್ಪು ಅಪ್ಪುವ ಪ್ರಶ್ನೆಯೇ ಇಲ್ಲ. (ಎದ್ದು ಬಂದು ನವಾಬನ ತೋಳು ಹಿಡಿದುಕೊಂಡು) ಎಲ್ಲವೂ ಸರಿ. ಒಪ್ಪಿಕೋ. ನಿನ್ನ ಆಟ ನಡೆಯುವುದಿಲ್ಲ. ಈ ಹುಡುಗಿಯನ್ನು ಮತಾಂತರ ಮಾಡಿದೆ. ದಂಗೆಯಾಯಿತು. ಹೆಂಗಸರು, ಮಕ್ಕಳು ಸತ್ತರು. ಭ್ರೂಣಹತ್ಯೆ ಆಯಿತು. ಎಲ್ಲವೂ ನಿನ್ನಿಂದ. ನೀನು ಅಪರಾಧಿ. ನಮ್ಮ ದೃಷ್ಟಿಯಲ್ಲಿ ನಿನಗೆ ಮತ್ತೆ ಮಾತಾಡುವ ಅವಕಾಶವೂ ಇಲ್ಲ. ಅದು ತಿಳಿದುಕೋ. ಸಾವಿರಾರು ಜನ ಅಮಾಯಕರನ್ನು ಕೊಂದವನಿಗೆ ಏನು ಶಿಕ್ಷೆ ಗೊತ್ತಾ?

ಎಲ್ಲರೂ : ಗಲ್ಲು ಶಿಕ್ಷೆ. (ಬೇಗಂ ಕೈ ಚಪ್ಪಾಳೆ ಹೊಡೆಯುವಳು)

(ಗದ್ದಲ) (ಗೌರಿ ಕುಸಿದು ಕೂತುಕೊಳ್ಳುತ್ತಾಳೆ.)

ನವಾಬ : (ಗಂಭೀರವಾಗಿ ಎದ್ದು ನಿಲ್ಲುತ್ತಾನೆ. ಸೈನಿಕರು ಅವನ ಕೋಳ ಬಿಚ್ಚುತ್ತಾರೆ. ಮುಸುಕು ಹಾಕಲು ಬರುತ್ತಾರೆ)

ತಡೆಯಿರಿ. ನನ್ನನ್ನು ಗಲ್ಲಿಗೇರಿಸಲು ಅಷ್ಟೊಂದು ಅವಸರ ಬೇಡ. ಸಾಯುವ ಮೊದಲು ಸಾವಿಗೆ ಅಂಜದೆ ಹೇಳುತ್ತೇನೆ. ನಾನು ಓಡಿ ಹೋಗುತ್ತೇನೆ ಅಂತ ಹೆದರಬೇಡಿ. ಅಂಥ ಪುಕ್ಕಲುತನವಿದ್ದರೆ ಈ ನಿಮ್ಮ ಹೊಸ ರಾಜನಿಗೆ – ಈ ನಿಮ್ಮ ಬೇಗಂಗೆ ಇರಬಹುದು. ಯಾಕೆಂದರೆ, ಅವರ ಕಣ್ಣುಗಳಲ್ಲಿ ಅನೇಕ ಭ್ರೂಣ ಹತ್ಯೆಯ ಕಳೆಯಿದೆ. ಅದರಿಂದ ಅವರು ಪಾರಾಗಲಾರರು. ಅಧಿಕಾರ ಅವರಿಗೆ ನಾನು ಬಿಸಾಕಿದ ಎಂಜಲೆಲೆ.

(ಸಖ ಮತ್ತು ಬೇಗಂ ಇಬ್ಬರೂ ನವಾಬನ ಇಕ್ಕೆಲದಲ್ಲಿ ಬಂದು ನಿಂತು)

ಸಖ ಮತ್ತು ಬೇಗಂ : ಬಾಯಿ ಬಿಗಿ ಹಿಡಿದು ಮಾತಾಡು.

ನವಾಬ : ಅದರ ಅವಶ್ಯಕತೆ ನನಗಿಲ್ಲ.

(ಇಬ್ಬರೂ ಅವನ ತೋಳನ್ನು ಹಿಡಿಯುವರು. ನವಾಬ ಒಂದೇ ಕ್ಷಣದಲ್ಲಿ ತೋಳು ಬಿಡಿಸಿ)

ಅಧಿಕಾರಕ್ಕೆ ಜೊಲ್ಲು ಸುರಿಸಿ ನರಮೇಧ ನಡೆಸಿದ ನೀವು ನನ್ನಂಥವರ ಆತ್ಮವಿಶ್ವಾಸವನ್ನು ಕುಗ್ಗಿಸಲಾರಿರಿ. ಅದನ್ನು ನೆನಪಿಟ್ಟುಕೊಳ್ಳಿ. ನಾನು ಜೀವನವಿಡೀ ಹುಡುಕಿದ್ದು ಒಂದೇ ಒಂದು – ಜನ ಯಾಕೆ ಹೀಗೆ? ಕೊನೆಗೂ ಅದು ಸಿಗಲಿಲ್ಲ.

ಸಖ : (ಗಹಗಹಿಸಿ ನಗುತ್ತಾ) ಅದಕ್ಕೆ ಉತ್ತರ ಬೇಕು ತಾನೆ?

ನವಾಬ : ಜನರು ಯಾಕೆ ಹೀಗೆ?

ಸಖ : ನೀನೇ ನೋಡು-ಆಮೇಲೆ ಗಲ್ಲಿಗೇರಿಸುತ್ತೇನೆ. ನನಗೂ ಅವಸರವಿಲ್ಲ. ನಿನಗೂ ಅವಸರವಿಲ್ಲ. ಹೇಗೂ ಸಾಯ ಹೊರಟವನು ನೀನು. ನನಗಂತೂ ನನ್ನ ಮನಸ್ಸಿನಲ್ಲಿ ಏನಿದೆ ಅಂತ ಖಚಿತವಿದೆ. ಏನೂ ಗೊಂದಲವಿಲ್ಲ. ನಾಟಕ ರಂಗದ ಮೇಲೆ ನಡೆಯುವ ದೃಶ್ಯಾವಳಿಗಳನ್ನು ಬಾಯಿ ತೆರೆದು ನೋಡುವ ಮೂಕ ವೀಕ್ಷಕ ನೀನು. ಜೂಜಿನಲ್ಲಿರುವ ಮಜಾ ನಿನಗೆ ಗೊತ್ತಿಲ್ಲ ನವಾಬ. ಜಗತ್ತಿನಲ್ಲಿರುವ ಎಲ್ಲಾ ಮಜಾ, ಅದರ ನೊರೆಗಳನ್ನೂ ಕಳೆದುಕೊಂಡ ಭಿಕಾರಿ ನೀನು. ನಿನಗೇನು ಗೊತ್ತು? ಸುಖಗಳಿಗೆ ಯಾವೆಲ್ಲ ರೀತಿಯ ಅಮಲು ಬರುಸುವ ಗುಣವಿದೆ ಅಂತ ತಿಳಿದುಕೋ. ಸಾಯುವ ಕೊನೆಯ ಗಳಿಗೆಯಲ್ಲಾದರೂ ಅದು ತಿಳಿದಿರಲಿ. ಸತ್ಯಕ್ಕಿಂತ ಸುಳ್ಳು ರುಚಿಕರವಾಗಿರುತ್ತದೆ. ನೀನು ಎಂಥ ದಡ್ಡನೆಂದರೆ, ಗಝಲ್ ಹಾಡುವವರ ಎದುರು ಕುಳಿತು ಸತ್ಯದ ಬೆಲೆಯಷ್ಟು ಎಂದು ಕೇಳುತ್ತೀಯಾ? ಪಕ್ಕದಲ್ಲಿ ಮಲಗಿರುವ ಹೆಣ್ಣಿನಲ್ಲಿ ಅಹಿಂಸೆಯಿಂದ ಸುಖವಿದೆ ಅನ್ನುತ್ತೀಯ. ಆದರೆ ಆ ಹೆಣ್ಣಿಗೆ ಸುಖವಾದ ನೋವು ಖುಷಿ ಕೊಡುತ್ತೆ ಎನ್ನುವುದನ್ನು ಮರೆಯುತ್ತೀಯ. ನಿನ್ನ ಬೆಳ್ಳಿ ಗಡ್ಡಕ್ಕಿಂತ ನನ್ನ ಹರೆಯಮೀಸೆ ತುಂಬಾ ಕಲಿತಿದೆ. ಈಗ ನೋಡು–ನನ್ನ ತುದಿ ಬೆರಳಿನಲ್ಲಿ ಬೊಂಬೆಗಳಿವೆ. ಅವು ದಾರ ಕಟ್ಟಿದಂತೆ ಕುಣಿಯತೊಡಗುತ್ತವೆ.

(ನವಾಬ ಸುಮ್ಮನುಳಿಯುತ್ತಾನೆ. ಇಡಿಯ ಆಸ್ಥಾನವೆಲ್ಲ ಒಂದು ಮೌನ)

ಸಖ : ಬೇಗಂ, ನೀವು ಅಧಿಕಾರದ ತುದಿಯಲ್ಲಿದ್ದೀರಿ. ಇನ್ನು ಏನೂ ತೊಂದರೆಯಿಲ್ಲ ನಿಮಗೆ.

ಬೇಗಂ : ಹೌದು. ಈ ನಾಡಿನ ಅಧಿಕಾರವೆಲ್ಲವೂ ನನಗಾದ್ದರಿಂದ – ಆಗಿನಿಂದ ಆಲೋಚಿಸುತ್ತಿದ್ದೇನೆ, ನಿಮಗೆ ಯಾವ ಅಧಿಕಾರ ಕೊಡಬಹುದು ಅಂತ. ನನ್ನ ಅಧಿಕಾರದಲ್ಲಿ ಮಂತ್ರಿ ಸೇನಾಧಿಪತಿಯೇ ಹೆಚ್ಚು ಅಧಿಕಾರಯುತನಾಗಿರಬೇಕೆಂದು ನನ್ನ ಆಸೆ. ನಾಳೆಯೇ ಸಾರ್ವಜನಿಕರ ಮುಂದೆ ನೀವು ಅಧಿಕಾರ ಸ್ವೀಕರಿಸಬೇಕು.

ಸಖ : ನಾವೊಂದು ಆಟವಾಡೋಣ. ನಾನು ರಾಜ. ನೀನು ಮಂತ್ರಿ. ಈ ಜೋಯಿಸ ಸೇನಾಧಿಪತಿ. ಆಗದೆ?

ಬೇಗಂ : ಯಾಕೆ?

ಸಖ : ನಿಜವಾಗಿಯೂ ಹಾಗೆಯೇ ಆದರೆ?

ಬೇಗಂ : ಅದು ನೀವು ನನಗೆ ಮಾಡಿದ ಮೋಸ.

ಸಖ : ಮೋಸ ಅನ್ನುವುದು ನಿನಗೆ ಅಪರಿಚಿತ ಪದವಲ್ಲ. ಅದು ನಿನ್ನ ಭಾಷಾ ನಿಘಂಟಿನಲ್ಲಿ ಸದಾ ಬಳಕೆಯಲ್ಲಿ ಇರುವಂಥದ್ದು.

ಬೇಗಂ : ಅಂದರೆ?

ಸಖ : ಅಂದರೇನಿಲ್ಲ. ನಾನು ನವಾಬನ ಬದಲಿಗೆ ನಾಳೆ ಸಿಂಹಾಸನ ಏರಲಿದ್ದೇನೆ. ನೀನು ಯಥಾ ಸ್ಥಿತಿಯಲ್ಲಿ. ಅಂತಃಪುರದ ಒಳಗಡೆಗೆ. ವ್ಯವಸ್ಥೆ ಬದಲಾಗಬಹುದು. ಆದರೆ ನಿಮ್ಮಂಥವರ ಸ್ಥಿತಿಯು ಬದಲಾಗುತ್ತಿದೆಯೆಂದು ಕನಸು ಕಾಣಬೇಡ. ಕಸಬರಿಕೆ, ಕಾಲಿನ ಜೋಡು, ಎಲ್ಲಿರಬೇಕೋ ಅಲ್ಲಿದ್ದರೆ ಚೆಂದ. ಮೆಟ್ಟಿದ ಜೋಡನ್ನು ಚೆಂದವಿದೆಯೆಂದು ತಲೆಯಲ್ಲಿ ಇಟ್ಟುಕೊಳ್ಳುವುದಿಲ್ಲ ಹೆಂಗಸೆ.

ಬೇಗಂ : (ಸಿಟ್ಟಿನಿಂದ) ವಂಚಕ, ಗಂಟುಕಳ್ಳ, ಕಚ್ಚೆಹರುಕ, ಮೋಸಗಾರ–ಥೂ ನಿನ್ನ ಜನ್ಮಕ್ಕೆ–ಮೋಸ ಮಾಡ್ತಿಯೇನೋ? ಏನೂಂತ ತಿಳ್ಕೊಂಡೆ ನನ್ನ? ಸಾಧಾರಣ ಹೆಂಗಸಲ್ಲ ನಾನು

ಮೂಸಿ ಬಿಸಾಡೋಕೆ. (ನೆಲಕ್ಕೆ ಬಡಿಯುತ್ತಾ) ವಂಚಕ ಕಾಶೀ ಪಂಡಿತ - ಕದ್ದು ಮೀನು ತಿಂದ ಹಾಗೆ. ಕದ್ದು ಹಾದರ ಮಾಡಿದ ಹಾಗೆ ಅಂತ ತಿಳ್ಕೊಂಡಿಯೇನೋ. ನಿನ್ನ ಬಿಡೋದಿಲ್ಲ ಕಣೋ. ನಿನ್ನ ಜನಿವಾರ, ಶಿವದಾರ, ಆ ಮಣಿ, ಈ ಮಣಿ, ಪಚ್ಚೆ ಉಂಗುರ, ಭಸ್ಮ-ಗಿಸ್ಮ, ಜುಟ್ಟು ಅದರ ಆಟ ನನ್ನಲ್ಲಿ ನಡೆಯೋಲ್ಲ.

ಸಖ : ಥೂ ಹಲ್ಕಾ ಹೆಂಗಸು. ಮಾನ ಮರ್ಯಾದೆ ನಿಂಗೆ ಇದ್ದರೆ ತಾನೆ ನಂಗೆ ಇರೋದು. ಮುದಿಸೂಳೆ ನೀನು. ಏಯ್ ಏನ್ ನೋಡ್ತೀರಾ? ನಡುಬೀದಿಯಲ್ಲಿ ಈ ಹಾದರಗಿತ್ತಿಯನ್ನು ಬೆತ್ತಲೆ ಮೆರವಣಿಗೆ ನಡೆಸಿ. ಅವಳ ಮಾನ ಮರ್ಯಾದೆಯೆರಡೂ ನಮ್ಮ ಗಂಡಸರ ಕಣ್ಣಿಗೆ ಬೀಳಬೇಕು. "ಒಂದೇ ಒಂದು ಆಟ. ನೋಡಲು ಮರೆಯದಿರಿ. ನೋಡಿ ಆನಂದಿಸಿರಿ ನಿಮ್ಮ ಊರಿನ ಬೀದಿ ಬೀದಿಯಲ್ಲಿ ಹಳೆಯ ಬೇಗಮ್ಮಳ ಬೆತ್ತಲೆಯ ಮೆರವಣಿಗೆ. ಖುದ್ದಾಗಿ ಬಂದು ವೀಕ್ಷಿಸಲು ಮರೆಯದಿರಿ" ಅಂತ ಇಂದೇ ಡಂಗುರ ಹೊಡೆಯಿರಿ. ಜನ ಸಾಲುಗಟ್ಟಿ ನಾಳೆ ನಿಲ್ಲುತ್ತಾರೆ. (ವಿಕಟ ನಗೆಯಿಂದ) ನವಾಬನಿಗೆ ನೀನು ಕಿರುಬೆರಳಾಗಿರಬಹುದು. ನನಗೆ ನೀನು ನನ್ನ ಕಾಲಿನ ಉಂಗುಷ್ಠ, ನೆನಪಿಟ್ಟುಕೋ. ಎಲ್ಲಾ ಬಿಡಿಸಿ ಹೇಳಿದೆ....

ಬೇಗಂ : ಬೆಂಕಿಗೆ ಕೈ ಹಾಕಿದ್ದೀಯೋ, ಕೈ ಸುಡುತ್ತದೆ ನಿನಗೆ.

ಸಖ : ನಾಳೆ ನಿನ್ನ ಮೆರವಣಿಗೆ ಹೊರಡುವಾಗ ತಿಳಿಯುತ್ತದೆ.

ನವಾಬ : (ಗಂಭೀರವಾಗಿ) ನಿಮ್ಮ ರಾಜ್ಯದಲ್ಲಿ ಹೆಂಗಸರ ಬೆತ್ತಲೆ ಮೆರವಣಿಗೆಯ ಮುನ್ನುಡಿಯನ್ನು ಬರೆಯುತ್ತಿದ್ದೀರಿ. ವಿನಾಶಕ್ಕೆ ಬೇರೆ ಬೇರೆ ಶಸ್ತ್ರಾಸ್ತ್ರಗಳನ್ನು ತರಬೇಕಿಲ್ಲ. ನಿಮ್ಮೊಳಗೆ ನೀವೇ ಹುಟ್ಟು ಹಾಕುತ್ತಿದ್ದೀರಿ. (ಬೇಗಂ ಕಡೆ ತಿರುಗದೆ-ಕೈ ತೋರಿಸಿ) ಇವಳು, ಈ ಹೆಂಗಸು ಎಂಥವಳೇ ಆಗಿದ್ದರೂ ನನ್ನ ರಾಜ್ಯದಲ್ಲಿ ಕ್ಷಮೆ ಎಂಬ ಪದದ ವಿನಾಯಿತಿ ದೊರೆಯುತ್ತಿತ್ತು. ಅವಳಿಗೆ ಬದುಕುವ ಮತ್ತು ತನ್ನ ಮಾನ ಮರ್ಯಾದೆ ಕಾಪಾಡಿಕೊಳ್ಳುವ ಹಕ್ಕಿದೆ. ಅದನ್ನು ಬಲಾತ್ಕಾರದಿಂದ ಕಿತ್ತೆಸೆಯುವ ಹಕ್ಕು

ರಾಜ್ಯಾಡಳಿತಕ್ಕೆ ಇಲ್ಲ. ಇನ್ನು ನಿಮಗೆ ಬೇಕಾದ್ದು ಮಾಡಿಕೊಳ್ಳಿ, ನಾನು ಅಡ್ಡಿ ಬರುವುದಿಲ್ಲ.

ಜೋಯಿಸ : (ಎದ್ದು ನಿಂತು) ನಾನು ಏನು ಹೇಳಬೇಕು ಅಂತ ಇದ್ದೀನಿ ಅಂದ್ರೆ

ಋಗ್ವೇದಿ : (ತಕ್ಷಣ) ಬಾಯಿ ಮುಚ್ಕೊಂಡು ಕೂತ್ಕೊಳ್ಳಿ ಜೋಯಿಸರೆ. ಎಂಥಾ ಪರಂಪರೆ ನಮ್ಮದು. 'ಯತ್ರ ನಾರ್ಯಸ್ತು ಪೂಜ್ಯಂತೆ ರಮಂತೆ ತತ್ರ ದೇವತಾ' ಎಲ್ಲಿ ಸ್ತ್ರೀಯರು ಪೂಜಿಸಲ್ಪಡುತ್ತಾರೋ ಅಲ್ಲಿ ದೇವತೆಯರಿರುತ್ತಾರೆ ಗೊತ್ತಾ?

ಜೋಯಿಸ : ಕಂಡಿದ್ದೀನಿ, ಕಂಡಿದ್ದೀನಿ. ಏನ್ ಮಹಾ. ಮಠಕ್ಕೆ ಹತ್ತಿರದವರು ಅಂತ ಹೀಗೆ ಸಂಸ್ಕೃತ ಉದುರಿಸೋದಾ? ನಮ್ಗೇನು ಸಂಸ್ಕೃತ ಗೊತ್ತಿಲ್ದ ಕಿಸ್ಬಾಯಿದಾಸರು ಅಂದ್ಕೊಂಡ್ರಾ? "ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ" ಹಾಗಂದ್ರೆ ಏನಪ್ಪಾ? (ಗತ್ತಿನಲ್ಲಿ) ಇದೇ ನೋಡಿ. ಹೆಂಗಸಿಗೆ ಸ್ವಾತಂತ್ರ್ಯ ಕೊಟ್ರೆ ಅರ್ಧರಾತ್ರೀಲಿ ಕೊಡೆ ಹಿಡ್ಕೊಂಡು ತಕತಕ ಕುಣೀತಾಳೆ. (ಜೋಯಿಸ ವೈಯ್ಯಾರದಿಂದ ಕುಣಿಯುತ್ತಾ)

ಸಖ : ಇನ್ನು ಇದು ನಡೆಯುವುದಿಲ್ಲ.

ಬೇಗಂ : ನಿಮ್ಮೆಲ್ಲರನ್ನು ಉರಿಹಚ್ಚಿ ಸುಟ್ಟು ಬಿಡ್ತೀನಿ. ಹೆಂಗಸರೆಂದರೆ ಸದರವಾಗಿದೆ ನಿಮಗೆ.

ಸಖ : ನಿನ್ನನ್ನು ಉದಾರವಾಗಿ ಕ್ಷಮಿಸುತ್ತೇನೆ. ಯಾಕೆ ಗೊತ್ತಾ? ಆ ರಹಸ್ಯ ನಿನ್ನೊಳಗಿರಲಿ. ಆದರೆ ನಿನ್ನ ನಿಜವಾದ ಬೆತ್ತಲೆ ಮನಸ್ಸು ನಿನಗೆ ಯಾವಾಗ ತಿಳಿಯುವುದೋ ಅಲ್ಲಿಯವರೆಗೆ ನೀನು ಕತ್ತಲೆಯ ಕೋಣೆಯಲ್ಲಿ ಹೊಯ್ದುಕೊಂಡು ಕಳೆಯುತ್ತೀಯಾ. ನನ್ನ ಮುದ್ದಿನ ಬೆಕ್ಕೆ ತಲೆಯ ನಿನ್ನ ಅಧಿಕಾರ ದಾಹವನ್ನೂ ನೀನೇ ಕಾಲಿಗೆ ಇಳಿಸಿಕೊಂಡೆ. (ಅವಳ ಸುತ್ತ ಬಂದು) ನೀನು ರೂಪವಂತೆ. ಆದರೆ ಅದಕ್ಕೆ ಗುಣ – ಊಹೂಂ ಇಲ್ಲ. ದೇವರು ಮೋಸ ಮಾಡಿದ.

ನಿನ್ನ ಸೀರೆಯ ಪ್ರತಿಯೊಂದು ಅಂಚಿನಲ್ಲಿಯೂ ವೈಯ್ಯಾರ ಇದೆ. ಆದರೆ ಏನು ಮಾಡುವುದು ಹೇಳು. ನಿತ್ಯ ನಿನ್ನ ಸೀರೆಯ ಸೆರಗು ನೋಡುತ್ತಾ ಕಾಲ ಕಳೆದೆ. ಅದರ ಬದಲು ಒಂದೇ ಒಂದು ಕ್ಷಣ ನೀನು ಅಗೋ ಅಲ್ಲಿ ನಿಂತಿದ್ದಾನಲ್ಲ, ಆ ಹುಚ್ಚ ನವಾಬ ಅವನ ಮೈದಡವಿ, ದೊರೆ ಬಾ ಅಂತ ಕರೆದು ಅವನ ಹಣೆಯನ್ನು ತಿಕ್ಕಿದ್ದರೆ ಅವನ ಹುಚ್ಚು ಇಳಿಯುತ್ತಿತ್ತು. ಆ ಬುದ್ಧಿ ನಿನಗೆ ಬರಲಿಲ್ಲ. ನಿನ್ನ ಎದುರಿನ ಕನ್ನಡಿ ನಿನಗೆ ಮೋಸ ಮಾಡಿತು. (ಅವನ ಒಂದೊಂದು ಮಾತಿಗೂ ಬೇಗಂ ಕುಸಿಯುತ್ತಾ ಹೋಗುವಳು) ನಿನಗೆ ಯೌವನದ ಅಹಂಕಾರ. ನಿನ್ನನ್ನು ಪ್ರೀತಿಸುತ್ತಾ ಜಗತ್ತನ್ನು ಪ್ರೀತಿಸುವುದನ್ನು ಮರೆತೆ. ಗಂಡನ ಮೇಲಿನ ದ್ವೇಷಕ್ಕೆ ನನ್ನನ್ನು ಏಣಿ ಮಾಡಿದೆ. ನಾನು ನಿನ್ನನ್ನು ವಶ ಮಾಡಿದೆ. ಈಗ ಏನೂ ಮಾಡಲಾಗುವುದಿಲ್ಲ. ನಿನ್ನ ಮೈ-ಮನಸ್ಸು ಎರಡೂ ವಾಸನೆಯಿಂದ ಹೊರಬರಲಾರದು. ನಿನ್ನ ದೇಹದ ತುಂಬಾ ಎಷ್ಟೊಂದು ಹುಳಗಳಿವೆ. ಅದನ್ನು ಕತ್ತಲೆಯ ಕೋಟೆಯಲ್ಲಿ ತೆಗೆಯುತ್ತಾ ಇರು. ಅದರ ಕೀವು ನಿನಗೆ ಸುಖ ತರಲಿ. (ಒಮ್ಮೆಲೇ ಜೋರಾಗಿ) ಯಾರಲ್ಲಿ? ಈ ಅಪಶಕುನದ ಹಕ್ಕಿ ಇನ್ನು ಇಲ್ಲಿರುವುದು ಬೇಡ. ದರದರನೆ ಎಳೆದುಕೊಂಡೊಯ್ದು ಕತ್ತಲೆಯ ಕೋಣೆಯಲ್ಲಿ ಹಾಕಿ. ನವಾಬರೆ, ಹೇಗಿದೆ ದೃಶ್ಯ?

ನವಾಬ : ನನಗೂ-ಅದಕ್ಕೂ ಯಾವ ಸಂಬಂಧವಿಲ್ಲ.

ಸಖಿ : ಎರಡನೆಯ ದೃಶ್ಯವೂ ಮುಗಿಯಲಿ. ಗೌರಿಯನ್ನು ಏನು ಮಾಡೋಣ?

ಜೋಯಿಸ : (ಎದ್ದು ನಿಂತು ಕೈ ಮುಗಿಯುತ್ತಾನೆ) (ರಾಗ ಬದ್ಧವಾಗಿ)

ನಾನಿದ್ದೇನಲ್ಲ
ನಾನಿದ್ದೇನಲ್ಲ
ಕತ್ತಿ ತಾಗದಲ್ಲ
ಉರಿಯು ಹತ್ತದಲ್ಲ
ಬಾವಿಗೆ ಬೀಳೆನಲ್ಲ
ಮತ್ತೆ ಬೇರೆ ಏನೂ ಇಲ್ಲ

ಗೌರಿಗೆ ನಾನಿದ್ದೇನ್ಲ
ಆಹಾ! ನಾನಿದ್ದೇನಲ್ಲ.

ಸಖ : ಹುಚ್ಚಾಟ ಸಾಕು.

ಪುರೋಹಿತ : ಓಡಿ ಹೋದವಳು ನನ್ನ ಮಗಳೇ ಅಲ್ಲ. ಏನೂ ಬೇಕಾದರೂ ಮಾಡಿಕೊಳ್ಳಿ.

ಸಖ : (ನಯದಿಂದ) ಗೌರಿ. ಇಲ್ಲಿ ಬಾರಮ್ಮ. ನೀನು ಯಾಕೆ ಹೀಗೆ ಮಾಡಿದೆ?

(ಗೌರಿ ಮೌನ)

ಸಖ : ಮೌನ ವಹಿಸಿದರೆ ನಾವೇ ತೀರ್ಮಾನ ತೆಗೆದುಕೊಳ್ಳುತ್ತೇವೆ.

ಗೌರಿ : ಇಲ್ಲಿ ಈ ಮೊದಲು ಆಗಿರುವುದನ್ನು ನೋಡಿದರೆ ನಾನು ಮಾತಾಡುವುದಕ್ಕೆ ಅರ್ಥವಿದೆಯೆಂದು ಅನಿಸುವುದಿಲ್ಲ.

ಸಖ : ಹಾಗನ್ನಬಾರದಮ್ಮ. ನಿನ್ನ ವಿಷಯವೇ ಬೇರೆ.

ಗೌರಿ : ಸರಿ.

ಸಖ : ಯಾವುದನ್ನೂ ಕೆದಕುವುದಿಲ್ಲ. ಮುಂದೇನು ಅಂತ ಮಾತ್ರ ಕೇಳ್ತೇನೆ.

ಜೋಯಿಸ : (ಸಖನ ಕಾಲಿಗೆ ಬಿದ್ದು) ಏನಪ್ಪಾ ಅಂದರೆ – ನಾನು ಕೆಲವು ವಿಷಯ ಕೇಳಲಿದ್ದೇನೆ. ತಾವು ಅಡ್ಡ ಬರಬಾರದು. ಈತನಕ ನನ್ನ ಕೈಲಾದ ಎಲ್ಲಾ ಸಹಾಯ ಮಾಡಿದ್ದೇನೆ. ಅದು ತಮಗೂ ಗೊತ್ತು. ಏನಪ್ಪಾ ಅಂದರೆ....

ಸಖ : ಆಯ್ತು ಮುಂದುವರಿಸಿ.

ಜೋಯಿಸ : (ಮೂಗು ತಿಕ್ಕುತ್ತ) ಇಲ್ಲಿ ಬಾರೆ. ಕೈ ಕಟ್ಟಿ ನಿಂತುಕೋ.

ಗೌರಿ : ಇಲ್ಲ, ನನಗೆ ಬೇಕಾದ ಹಾಗೆ ನಿಂತುಕೊಳ್ತೀನಿ. ಅದೇನು ಕೇಳಿ.

ಜೋಯಿಸ : (ಕಾಲು ಸರಿಸಿಕೊಂಡು) ನೀನು ನಂಗೆ ಮೋಸ ಮಾಡಿ ಓಡಿ ಹೋದ್ದು ಯಾಕೆ?

ಗೌರಿ : ಸಾಯೋದಕ್ಕೆ.

ಜೋಯಿಸ : ಈ ಗೂಬೆ ಎಲ್ಲಿ ಸಿಕ್ಕಿದ?

ಗೌರಿ : ನಿಮ್ಮ ಮುಖ ನೋಡ್ಕಂಡಿದ್ದೀರಾ? (ಎಲ್ಲರೂ ನಗು)

ಜೋಯಿಸ : ಯಾರು ನಗಾಡಬೇಡಿ. ಪ್ರಶ್ನೆ ಕೇಳುವುದು ಮರ್ರು ಹೋಗುತ್ತೆ. ಈ ಮುದ್ಕನಿಗಿಂತ ನಾನು ಚೆನ್ನಾಗಿಲ್ವಾ? ನಂದೂ-ನಿಂದೂ ಒಂದೇ ಜಾತಿ ಬೇರೆ.

ಗೌರಿ : ಸಿಂಬಳ ಕೈಯಲ್ಲಿ ಒರಸೋದು, ಕಂಕುಳು ಒರೆಸೋದು, ಅದನ್ನು ಮೂಸೋದು, ಬೆನ್ನು ಬಾಗಿರೋದು, ಎಲುಬು ಕಾಣಿಸ್ತಿರೋದು, ಉದ್ದಹಲ್ಲು ಎಲ್ಲಾ ನೋಡಿದರೆ ಹಿರಣ್ಯಾಕ್ಷನನ್ನು ಕೊಲ್ಲಲು ಬಂದ ವಿಷ್ಣುವಿನ ಅವತಾರದ ಹಾಗೆ ಕಾಣಿಸುತ್ತದೆ.

ಜೋಯಿಸ : (ಕಂಕುಳು ಒರೆಸಿಕೊಳ್ಳುತ್ತಾ) ಅದೆ ನಾನು ಹೇಳ್ತಿರೋದು. ಹ್ಹಾಂ-ಏನಂದೆ? ಹಿರಣ್ಯಾಕ್ಷನನ್ನು ಕೊಲ್ಲಲು ಬಂದ ವಿಷ್ಣುವಿನ ಅವತಾರ ಅಂದರೆ ಹಂದಿಯೇ. (ತಕತ್ಯೆ ಕುಣಿಯುತ್ತಾ) ಅವಮಾನ-ಅವಮಾನ. ನಿಂಗೆ ನವಾಬನ ಜೊತೆ... (ಕೈ ಜೋಡಿಸುತ್ತಾ) ಸಂಬಂಧ? ಇದ್ದರೂ ಅಡ್ಡಿಯಿಲ್ಲ. ನನಗೆ ಪರವಾಗಿಲ್ಲ. ಎಲ್ಲಾ ನಾನು ಸುಧಾರಿಸಿಕೊಳ್ತೇನೆ. ಅಧಿಕೃತವಾಗಿ ಮದ್ವೆ ಅಂತ ಬೇಡ, ಹೇಗೆ?

(ಗೌರಿ ಅವನ ಮುಖಕ್ಕೆ ಉಗಿಯುವಳು. ಜೋಯಿಸ 'ಅಡ್ಡಿಯಿಲ್ಲ' ಎಂದು ಹೇಳಿ ಕುಣಿಯುವನು)

ಜೋಯಿಸ : ಗಿಣಿಯ ಹಾಂಗೆ ನೋಡುವೆ
ಮುದ್ದಿನ ರನ್ನದ ಗಿಣಿಯ ಹಾಂಗೆ ನೋಡುವೆ
ಬಾರೆ ನನ್ನ ಒಲವಿನ ತಾರೆ
(ತಲೆಯನ್ನು ಹೊಡೆದುಕೊಂಡು)
ಹೊಸ ರಾಗ ಹಾಡುತ್ತೇನೆ, ನಮ್ದೆಲ್ಲಾ ಹಳೆಯರಾಗ ಆಯ್ತು.
ರಾರಾ, ರಾಧಾ ರಾರಾ
ಆಆಉಊಋಋಖಖ.
ಒಫ಼ ಔ ಔ ಅಂ ಅಃ

ಸಖ : ಏನಿದು ಜೋಯಿಸರೆ? ಮರ್ಯಾದೆ ಏನಾಗಬೇಕು? ನಾಳೆ ನೀವು ಮಂತ್ರಿಯಾಗುವವರು.

ಜೋಯಿಸ : ಛಿ ಛಿ ಅದಕ್ಕೇನು. ಮಂತ್ರಿಯಾದರೆ ಕುಣಿಯಬಾರದು ಅಂತ ಎಲ್ಲಿದೆ? ಈ ಗೌರಿ ನನಗೆ ಬೇಕೇ ಬೇಕು. ಹೇಗಾದರೂ ಸರಿ.

ಗೌರಿ : ನಾನು ಮತ್ತೊಮ್ಮೆ ಓಡಿ ಹೋದೇನೇ ವಿನಃ....

ನವಾಬ : ಗೌರಿ....

ಮತ್ತೆ ದುಡುಕಬೇಡ.

ಗೌರಿ : ಮತ್ತೆ, ನಾನೇನು ಮಾಡಲಿ?

ನವಾಬ : ನಾಳೆ, ನನ್ನನ್ನು ಗಲ್ಲಿಗೇರಿಸುತ್ತಾರೆ.

ಗೌರಿ : ನನ್ನನ್ನೂ ಏರಿಸಲಿ.

ನವಾಬ : ಹಾಗೆನ್ನಬೇಡ.

(ಗೌರಿ ಬಂದು ನವಾಬನ ಕೈಯನ್ನು ಗಟ್ಟಿಯಾಗಿ ಹಿಡಿದುಕೊಳ್ಳುವಳು)

(ಇಬ್ಬರೂ ಪರಸ್ಪರ ಮುಖ ಮುಖ ನೋಡುವರು)

ನವಾಬ : (ಗೌರಿ ಮುಖ ಹಿಡಿದುಕೊಂಡು) ನಿನ್ನ ಕಣ್ಣುಗಳಲ್ಲಿ ನನ್ನ ಬಿಂಬವಿದೆ.

ಗೌರಿ : ನಿಮ್ಮ ಕಣ್ಣುಗಳಲ್ಲಿ ನನ್ನ ಮುಖ ಕಾಣಿಸ್ತಿದೆ.

ಇಬ್ಬರೂ : ಎಷ್ಟು ಚೆಂದ?

ನವಾಬ : (ಇದ್ದಕ್ಕಿದ್ದಂತೆ ಅವಳ ಮುಖವನ್ನು ಬಿಟ್ಟು ದೂರ ನಿಂತು) ಈ ಹುಡುಗಿಯನ್ನು ನಾನು ಕರೆತಂದು ಅಪರಾಧ ಮಾಡಿದ್ದೇನೆ. ಅವಳ ಮನಸ್ಸು ಕೆಡಿಸಿದ್ದೇನೆ. ಅವಳನ್ನು ಮುಟ್ಟಿದ್ದೇನೆ. ಮುಟ್ಟಿದ್ದು ಮುದಿತನದ ನನ್ನ ಏಕಾಕಿತನ ಹೋಗಲಾಡಿಸಲು. ಮನುಷ್ಯ ಸ್ಪರ್ಶ ಬೇಕಿತ್ತು. ಅದನ್ನು ಗೌರಿಯಿಂದ ಪಡೆದೆ. ಗೌರಿ ನಿರಪರಾಧಿ. ನಾನು ಕಾಮದ ಮೃಗವಲ್ಲ. ನನಗೆ ಮೈಯ ತುಂಬಾ ಬರಿಯ ರತಿಯ ವಾಸನೆಯೇ ತುಂಬಿದೆ ಎಂದು ನೀವು ನಿಮ್ಮ ಅಧಿಕಾರಕ್ಕಾಗಿ ಹಬ್ಬಿಸಿದ ಒಂದು ಪ್ರಚಾರ. ಬೇಗಂಗೂ ಅದೇ ಬೇಕಿತ್ತು. ನೀವು ಮೃಗಗಳಾಗದಿರಿ. ನಾನು ಮನುಷ್ಯನಾದೆ. ಆದರೆ ದಯವಿಟ್ಟು ಕೈಮುಗಿದು ನನಗಾಗಿ ಅಲ್ಲ, ಈ ಪುಟ್ಟ

(ಗೌರಿಯ ತಲೆಯ ಮೇಲೆ ಕೈಯಿಟ್ಟು) ಗೌರಿಯ ಭವಿಷ್ಯ ಹಾಳು ಮಾಡಬೇಡಿ. ಅವಳ ಸ್ವಾತಂತ್ರ್ಯ ಅವಳಿಗಿರಲಿ.

ಸಖ : ಗೌರಿ ಹೋಗು. ನೀನಿನ್ನು ಇಲ್ಲಿರಬೇಡ. ಮತ್ತೊಂದು ದೃಶ್ಯ ನನಗೆ ಅಗತ್ಯವಿಲ್ಲ. ಇದು ರಾಜಾಜ್ಞೆ, ಮೀರಬೇಡ.

(ಹೋಗುತ್ತಾಳೆ)

ಜೋಯಿಸ : ಏನು ಅಂದ್ರಿ, 'ಒಡೆದ ಕನ್ನಡಿವೋಲಾಯ್ತು, ನನ್ನ ಜೀವನ ಮುಂದೇನು ಋಗ್ವೇದಿಗಳೆ?

ಋಗ್ವೇದಿ : ನಿಮ್ಮ ತಲೆ.

ಜೋಯಿಸ : ಸರಿ-ಸರಿ. ನನ್ನ ತಲೆ ಒಡೆತ ಕನ್ನಡಿ ಚೂರಾಯಿತು. ಈ ಗೌರಿ ಅಲ್ಲದಿದ್ರೆ ಇನ್ನೊಬ್ಬು ಗೌರಿ. ಗಂಡಸಾಗಿರುವವರೆಗೆ ಗೌರಿಯರಿಗೆ ಬರಗಾಲ ಇಲ್ಲ.

ಸಖ : ನವಾಬ-ನಾಳೆ ತಲೆ ಉರುಳಲಿದೆ ಮತ್ತು ನಮ್ಮ ಈ ರಾಜ್ಯ ಜೋಯಿಸರು ಮಂತ್ರಿ, ಋಗ್ವೇದಿಗಳು, ಪುರೋಹಿತರು ಎಲ್ಲರು ಆಡಳಿತದಲ್ಲಿರುತ್ತಾರೆ

(ಆ ಕಡೆಗೆ ತಿರುಗಿ)

ಕರಿಯಜ್ಜ, ನಾಳೆಯಿಂದ ನೀವೂ ನಮ್ಮೊಂದಿಗಿರಬೇಕು.

ನಿಮಗೆ ಹೊಸ ಪೇಟ, ತುರಾಯಿ ಕೊಡಿಸಲಾಗುವುದು.

* * *

(ಕತ್ತಲೆ)

ನವಾಬ : ಸಾವಿನಲ್ಲಿ ಮುಕ್ತಾಯವಾಗುತ್ತಿದೆಯೆಂಬ ಬೇಸರವಿಲ್ಲ. ಸೂರ್ಯಕಿರಣ ಇನ್ನೇನು ಕೆಲವು ಕ್ಷಣಗಳಲ್ಲಿ ಭೂಮಿಗೆ ಬೆಳಕ ಹರಿಸಲಿದೆ. ಅಷ್ಟು ಹೊತ್ತಿಗೆ ನನ್ನ ಪ್ರಾಣವೂ ಹೊರಟು ಹೋಗಿರುತ್ತದೆ. ಯಾಕೆ ಹೀಗಾಯಿತು? ಕೊನೆಗೂ ಅರ್ಥವಾಗಲಿಲ್ಲ. ನ್ಯಾಯ ಸಮ್ಮತವಾಗಿದ್ದೆ. ನನ್ನ ಪಾಡಿಗೆ ನಾನಿದ್ದೆ. ಆದರೂ ನನ್ನ ಹಿಂದೆಯೇ ಎಷ್ಟೊಂದು ಸುರಂಗ ಮಾರ್ಗಗಳು? ನನ್ನ ಹತ್ಯೆಗಾಗಿ ಸಾವಿರಾರು ಜನರ ಮಾರಣ ಹೋಮ. ಇವರಿಗೆ ಅದು ಏನೂ ಅನಿಸಿಲ್ಲ ಯಾಕೆ? ಮನುಷ್ಯತ್ವಕ್ಕೆ ಹಂಬಲಿಸಿದೆ.

ಆದರೆ ಗೋರಿಯ ಮೇಲೆ, ಚಿತೆಯ ಮೇಲೆ, ಗರ್ಭಿಣಿಯರ ಹೆಣದ ಮೇಲೆ, ಭ್ರೂಣಗಳ ಮೇಲೆ ನರಕ ಸದೃಶ ಅಧಿಕಾರವನ್ನು ಏರಿದರು. ಸುಳ್ಳನ್ನೇ ಸತ್ಯವೆಂದು ಸಾಬೀತು ಪಡಿಸಿದರು. ಇಡಿಯ ನಾಡು ನಂಬಿತು. ಅವರ ಹತ್ತಿರ ತುತ್ತೂರಿಯಿದೆ. ಕಹಳೆಯಿದೆ. ಖಡ್ಗವಿದೆ. ಎಲ್ಲವೂ ಇವೆ. ಸುಳ್ಳು ಸತ್ಯವಾಗುತ್ತದೆ. ಸತ್ಯ ಸುಳ್ಳಾಗುತ್ತದೆ. ನಾವು ಹುಚ್ಚರಂತೆ ಕಾಣುತ್ತೇವೆ. ಅದನ್ನೇ ನಂಬಿಸುತ್ತಾರೆ. ಗೌರಿಯೂ ರಾಜಾಜ್ಞೆ ಮೀರಲಾಗದೆ ಹೊರಟು ಹೋದಳು. ಅಲ್ಲಿಗೆ ಮುಗಿಯಿತು ನನ್ನ ಲೌಕಿಕದ ಸಂಬಂಧ. ಬಹುಶಃ ಅವಳಿಗೂ ರಾಜಾಜ್ಞೆ ಸಂಬಂಧಕ್ಕಿಂತ ದೊಡ್ಡದು ಅನಿಸಿರಬೇಕು. ಸಂಬಂಧಗಳೂ ಅಷ್ಟೆ. ಗೌರಿಯೂ ಅಷ್ಟೆ.

(ನಿಟ್ಟುಸಿರು ಬಿಟ್ಟು) ಗೌರಿ ಮರೆತಿರಬಹುದು. ಸಣ್ಣ ಹುಡುಗಿ ಪಾಪ. ಒಳ್ಳೆಯದಾಗಲಿ. ಚೆನ್ನಾಗಿರಲಿ. ದಾರಿ ದೂರವಿದೆ ಅವಳಿಗೆ. ಅವಳ ನಂದಾದೀಪ ಆರದಿರಲಿ.

ಈ ಪಾಪಿಗಳಿಗೂ ಒಮ್ಮೆ ಅವರವರ ಅಂತರಂಗ ನೋಡುವ ಧೈರ್ಯ ಬರಲಿ. ಮತ್ತೇನೂ ಪ್ರಾರ್ಥಿಸಿಕೊಳ್ಳಲಾರೆ.

ಅಪ್ಪಾ ನಿಮ್ಮ ನೆನಪು ಬರುತ್ತೆ. ನೀವು ಹೇಳಿದ ಮಾತುಗಳು ಜೀವನದ ಉದ್ದಕ್ಕೂ ಅದನ್ನು ನಡೆಸಿಕೊಂಡು ಬಂದಿದ್ದೇನೆ. ಆ ಆತ್ಮ ತೃಪ್ತಿ ನನಗಿದೆ. ಸತ್ತ ಮೇಲೆ ಮತ್ತೆ ಬಂದು ನಿಮ್ಮ ತೊಡೆಯಲ್ಲಿ ಮಲಗುತ್ತೇನೆ. ನೀವು ನನ್ನ ತಲೆ ನೇವರಿಸಿ. ಅದೊಂದನ್ನೇ ನಿಮ್ಮಲ್ಲಿ ಕೇಳುತ್ತೇನೆ. ನಾನಿನ್ನು ಧೈರ್ಯಸ್ಥ. ಅಂಜುವುದಿಲ್ಲ.

(ಸೈನಿಕರು ಬರುತ್ತಾರೆ)

ಸೈನಿಕ : ಏನಾದರೂ ತಿನ್ನಲು ಬೇಕೆ? ಇಚ್ಚೆಯುಳ್ಳದ್ದನ್ನು ತಂದು ಕೊಡುತ್ತೇವೆ.

ನವಾಬ : (ನಿಶ್ಚಿಂತೆಯಿಂದ) ಏನೂ ಬೇಡ.

ಸೈನಿಕ : ಹೊಸಬಟ್ಟೆ?

| | | |
|---|---|---|
| ನವಾಬ | : | ಅಗತ್ಯವಿಲ್ಲ. |
| ಸೈನಿಕ | : | ದೇವರ ಪ್ರಾರ್ಥನೆ? |
| ನವಾಬ | : | ಅದೆಲ್ಲಾ ಇಲ್ಲ. |
| ಸೈನಿಕ | : | ಕೊನೆಯ ಬಾರಿಗೆ ಯಾರನ್ನಾದರೂ ನೋಡಲು ಇಚ್ಛೆ ಪಡುತ್ತೀರಾ? |
| ನವಾಬ | : | ನನಗೆ ಯಾರೂ ಇಲ್ಲ. |
| ಸೈನಿಕ | : | ನಿಮ್ಮ ಕೊನೆಯ ಹಾರೈಕೆಯಿದ್ದರೆ ತಿಳಿಸಿ. |
| ನವಾಬ | : | ಕೊಲ್ಲುವವರಿಗಿಂತ ಬದುಕಿಸುವವ ಯಾವಾಗಲೂ ದೊಡ್ಡವನು. ಅವನು ಯಾವುದೇ ಜಾತಿಯವನಾಗಿರಲಿ – ಅಂತ ನಿಮ್ಮ ದೊರೆಗೆ ತಿಳಿಸಿ. ವಿನಾಶ ಅನ್ನುವುದೇ ಶತ್ರು, ಅದರಿಂದ ಅಧಿಕಾರ ಚಲಾಯಿಸಲು ಆಗುವುದಿಲ್ಲ. ನೆನಪಿರಲಿ ಅಂತ ನವಾಬ ಹೇಳಿದನೆಂದು ತಿಳಿಸು. |
| ಸೈನಿಕ | : | ಭಯವಾಗುತ್ತಿದೆಯೆ? |
| ನವಾಬ | : | ಇಲ್ಲ. |
| ಸೈನಿಕ | : | ಹಾಗಿದ್ದರೆ ಕಪ್ಪುವಸ್ತ್ರ ಧರಿಸಿ. |
| | | (ನವಾಬ ಧರಿಸುತ್ತಾನೆ. ಸೈನಿಕ ನವಾಬನಿಗೆ ಮುಸುಕು ಹಾಕುತ್ತಾನೆ. ಒಂದು ಕಡೆಯಿಂದ ನಗು) |

(ಕತ್ತಲೆ)



## ಮುಕ್ತಾಯದ ಸಂಧಿ

(ರಂಗದ ಮೇಲೆ ಸಣ್ಣನೆಯ ಬೆಳಕು)

ಮಕ್ಕಳು ಮತ್ತು ಅಜ್ಜಿ ಕೂತಿರುತ್ತಾರೆ.

ಮಕ್ಕಳು : ಕತೆ ಮುಗಿತಾ?

ಅಜ್ಜಿ : (ಕಣ್ಣೀರನ್ನು ಒರಸುತ್ತಾ) ಮುಗೀತು ಕತೆ.

ಒಬ್ಬ : ಯಾಕಜ್ಜಿ ಅಳುತ್ತಿಯಾ?

ಅಜ್ಜಿ : ಸುಮ್ಮನೆ.

ಹುಡುಗಿ : ನನಗೂ ಅಳು ಬರುತ್ತಿದೆ.

ಮತ್ತೊಬ್ಬ : ಯಾಕೆ?

ಹುಡುಗಿ : ಪಾಪ, ಗೌರಿಯನ್ನು ನೆನಪಿಸಿಕೊಂಡು.

ಒಬ್ಬ : ನನಗೆ ನವಾಬನನ್ನು ನೆನಪಿಸಿಕೊಂಡು ಅಯ್ಯೋ ಪಾಪ ಅಂತ ಅನಿಸ್ತದೆ.

ಮತ್ತೊಬ್ಬ : ಗೌರಿ ಏನಾದಳೋ... ಏನು ಕತೆಯೊ?

ಹುಡುಗಿ : ಅಧಿಕಾರಕ್ಕೆ ಜನ ಎಷ್ಟು ಹಂಬಲಿಸಿಸ್ತಾರೆ ಅಲ್ವಾ? ಅಧಿಕಾರ ಇಲ್ಲವಾದ್ರೆ ಅವರಿಗೆ ನಿದ್ದೆ ಬರೋಲ್ಲ. ಊಟ ಸೇರೋಲ್ಲ.

ಒಬ್ಬ : ಅಜ್ಜಿ, ಮಾತಾಡು ಯಾಕೆ ಸುಮ್ಮನೆ ಕುಳಿತೆ. ಇನ್ನೊಮ್ಮೆ ಕಣ್ಣುಮುಚ್ಚಾಲೆಯಾಟ ಆಡೋಣ್ವಾ?
ಕಣ್ಣೆ ಮುಚ್ಚೆ ಕಾಡೇಗೂಡೇ
ಉದ್ದಿನಮೂಟೇ ಉರುಳೇ ಹೋಯ್ತು

ನಮ್ಮಯ ಹಕ್ಕಿ ಬಿಟ್ಟೆ ಬಿಟ್ಟೆ
ನಿಮ್ಮಯ ಹಕ್ಕಿ ಅಡಗಿಸಿಕೊಳ್ಳಿ.

ಅಜ್ಜಿ : ಅಡಗಿಸಿಕೊಳ್ಳುವುದು ಎಲ್ಲಿಂದ ಬಂತು ಕಂದ? ನಾನೇ ಆ ಗೌರಿ.

(ಎಲ್ಲಾ ಮಕ್ಕಳನ್ನು ಹತ್ತಿರಕ್ಕೆ ಎಳಕೊಂಡು

ಇದನ್ನೆಲ್ಲಾ ನಾನು ಕಣ್ಣಾರೆ ನೋಡಿದೆ; ರಕ್ತ-ಮಾಂಸ; ಮನುಷ್ಯರ ವಿಕಾರ; ಮನುಷ್ಯರ ಮುಖವಾಡ. ಮನುಷ್ಯರಲ್ಲಿ ಇರುವ ಹೃದಯ ಕನ್ನಡಿಯಲ್ಲಿ ನೂರೊಂದು ವಿಕಾರ. ಒಬ್ಬ ಮನುಷ್ಯನಿಗೆ ಮತ್ತೊಬ್ಬ ಛಿಕ್ಕಿ ಹೊಡೆದು ನೆತ್ತರು ಕಾರುವುದ್ನು ನೋಡದೆ ನಿಜ ಹೇಳ್ತೇನೆ ಮಕ್ಕಳೇ-ನನಗೆ ಮಾತ್ರ ಇದು ಯಾವುದೂ ಬೇಕಿರಲಿಲ್ಲ. ಬಿಳಿಯ ಪಾರಿವಾಳದ ಹೊರತು ನಿಮಗೂ ಅಷ್ಟೆ.

(ಅಜ್ಜಿ ಮಧ್ಯೆ ಕುಳಿತಿರುತ್ತಾಳೆ. ಮಕ್ಕಳು ಬಿಳಿಯ ಬಟ್ಟೆಯನ್ನು ತೆಗೆದು ಅಜ್ಜಿಯ ಸುತ್ತ ಕುಣಿಯುತ್ತಾರೆ)

ಹಾಡು : ಯುದ್ಧವ ಸಾರೆವು ನಾವು
ಜಗಳ ಆಡೆವು
ಶಾಂತಿಯ ಬೀಜ ಬಿತ್ತುವೆವು
ಹಸಿರನು ಬೆಳೆದು ಕುಣಿಯುವೆವು
ಮಂಗಲವಾಗಲಿ ಜಗಕ್ಕೆಲ್ಲಾ
ಮಂಗಲವಾಗಲಿ ನಿಮಗೆಲ್ಲ





ರಸಾನುಭವದ ವಿಶ್ಲೇಷಣೆಯಲ್ಲಿ ಅಭಿನವಗುಪ್ತನು ಇಂದ್ರಿಯ ಹಂತದಿಂದ ಪ್ರಾರಂಭಿಸುತ್ತಾನೆ. ನೋಡಲು ಮತ್ತು ಕೇಳಲು ಹಿತವಾದ ವಸ್ತುಗಳ ಪ್ರತ್ಯಕ್ಷ ಗ್ರಹಣದಿಂದ ರಸಾನುಭವ ಪ್ರಾರಂಭವಾಗುತ್ತದೆ ಎಂದು ಅವನು ಹೇಳುತ್ತಾನೆ. ಅವನ ಪ್ರಕಾರ ಇವೆರೆಡು ಮಾತ್ರವೇ ರಸವನ್ನು ಒದಗಿಸುವ ಇಂದ್ರೀಯಗಳು. ಏಕೆಂದರೆ ನಾಟಕವು ಏಕಕಾಲದಲ್ಲಿ ಬಹುಮಂದಿಯ ಕಣ್ಣು ಮತ್ತು ಕಿವಿಗಳಿಗೆ ಆಹ್ಲಾದ ಉಂಟು ಮಾಡುತ್ತವೆ.

(ಅಭಿನವಗುಪ್ತ – ಜಿ.ಟಿ.ದೇಶಪಾಂಡೆ. ಪು.೯೧)

ISBN 978-93-85120-91-6



ರಚನ ಪ್ರಕಾಶನ
ಮೈಸೂರು